# ಕೊರವಂಜಿ



ಆಗಸ್ಟ್ ೧೯೪೩

**ಮಾಸ ಪತ್ರಿಕೆ**

ಸಂಪಾದಕರು :
ಶ್ರೀ॥ ರಾ. ಶಿ.

ಚಿತ್ರಕಾರರು :
ಶ್ರೀ॥ ಆರ್. ಕೆ. ಲಕ್ಷ್ಮಣ್

ಬರಹಗಾರರು :

ಶ್ರೀ॥ ನಾ. ಕ.
ಶ್ರೀ॥ ನ್ಯಾ. ವಿ.
ಶ್ರೀ॥ ಕೃಷ್ಣಪ್ರಿಯ
ಶ್ರೀ॥ ಬೀರಣ್ಣ
ಶ್ರೀ॥ ಆಶುಕವಿ
ಶ್ರೀ॥ ಕಾರಂತ
ಶ್ರೀ॥ ಕಂಠಿ
ಶ್ರೀ॥ ಮೊ. ಮರಿಸ್ವಾಮಿ
ಶ್ರೀ॥ ಎಂ. ವಿ. ನಾ.
ಶ್ರೀ॥ ರಾ. ಪಾ. ಶಿರೋಳ
ಶ್ರೀ॥ ಪುರಂದರ

**ಬಿಡಿ ಪತ್ರಿಕೆ -- ಕೇವಲ ಎರಡಾಣೆ**

## ತಿಳಿನಗೆಯ ಮಾಸ ಪತ್ರಿಕೆ

# ಕೊರವಂಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

## ವಿಷಯಾನುಕ್ರಮಣಿಕೆ

ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ



ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ



# ಜ ಬ್ ಕೊ

## ಶಾಯಿಯನ್ನು

## ಉಪಯೋಗಿಸಬಾರದೇ ?




ಸಂಪುಟ ೨] ಕೊರವಂಜಿ—ಆಗಸ್ಟ್ ೧೯೪೩ [ಸಂಚಿಕೆ ೫

# ಕು ಹ ಕಿ ಡಿ ಗ ಳು

ದಕ್ಷಿಣ ಇಂಡಿಯಾಕ್ಕೆ ಬಾರದೆ ಇದ್ದ ಲಕ್ಷ ಅಮೇರಿಕಾ ಸೈನಿಕರು ಅಸ್ಸಾಂ ಪ್ರಾಂತ್ಯದ ಕಡೆಗೆ ಹೊರಟಿರುವರು, ಎಂಬ ದಕ್ಷಿಣ ಹಿಂದೂಸ್ಥಾನ ಪತ್ರಿಕೆಯ ಸುದ್ದಿಯು ಸುಳ್ಳಂತೆ.

* *

ಮಕ್ಕಳು ಅವರವರ ಆಹಾರವನ್ನು ಅವರೇ ಚುನಾಯಿಸಿದರೆ ಆರೋಗ್ಯವು ಚೆನ್ನಾಗುತ್ತದೆ ಎಂದು ಸ್ತ್ರೀ ವೈದ್ಯರ ಅಭಿಪ್ರಾಯ.

—ಆದರೆ, ಇಜ್ಜಲು ಮಣ್ಣು ಈಗ ವಿಪರೀತ ದುಬಾರಿ ಎಂಬುದನ್ನು ಮರೆಯಬಾರದು.

* *

ಸರಬರಾಜು ಇಲಾಖೆಯಿಂದ ಇನ್ನೂ ಅಷ್ಟಾಗಿ ಜನರಿಗೆ ಅನುಕೂಲವಾಗಿಲ್ಲ ಎಂದು ಪತ್ರಿಕೆಯೊಂದರ ಉದ್ಗಾರ.

—ಏಕೆ, ಈಗಾಗಲೇ ಅಲ್ಲಿ ಹಲವಾರು ಜನರಿಗೆ ಜೀವನ ಸಿಕ್ಕಿದೆಯಲ್ಲಾ?

* *

ಕಲಾಯಿ ಮಾಡುವವರಿಗೆ ತುಂಬಾ ಕಷ್ಟ, ಸಾಮಾನುಗಳೇ ಸಿಗುವುದಿಲ್ಲ ಎಂದು ಬಾತ್ಮಿ.

—ಅದೂ ಅಲ್ಲದೆ, ಈ ಆಹಾರ ಸಮಸ್ಯೆಗಳೇ ಜನರ ತಲೆಯನ್ನೆಲ್ಲಾ ಕಲಾಯಿ ಮಾಡುತ್ತಲಿದೆ.

ಮುಸ್ಸಲಿನಿಯು ಹಿಂದೂ ದೇಶಕ್ಕೆ ಬಂದು ಇಟಲಿಸ್ತಾನ್ ಚಳುವಳಿಯನ್ನು ಹೂಡುತ್ತಾನೆಂಬುದು ಶುದ್ಧ ಸುಳ್ಳು.

*       *

ನವೀನ ಮಾದರಿ ಸೀರೆಗಳನ್ನು ನೋಡಿದರೆ ಹೆಂಗಸರು ಅವುಗಳನ್ನು ಉಡುವುದಿಲ್ಲ.—ಅವುಗಳಿಂದ ಶಸ್ತ್ರ ಸಜ್ಜಿತರಾಗುತ್ತಾರೆ.

*       *

ಆಕೆಯು ಮಾತನಾಡುತ್ತಾಳೆಯೇ—ಛೀ, ಉಂಟೆ. ಅವಳ ಬಾಯೇ ಕಹಳೆ ಕೊಂಬು.

*       *

ಈಗೀಗ ನಾಯಿಗಳ ಜಾತಕಗಳನ್ನೂ ಓದುತ್ತಾರಂತೆ.—ಹಿಟ್ಲರನ ಜಾತಕ ನಾವು ಓದಿಸಲೇ ಬೇಕು.

*       *

"ಮದುವೆಯಾಗಲಿಚ್ಛಿಸುತ್ತಿರುವ ಯುವಕನೊಬ್ಬನು, ವಿವಾಹವಿಮುಖಿಯಾಗುವಂತೆ ಸಹಾಯಮಾಡುವ ಅನುಭವಶಾಲಿಯಾದ ಗೃಹಸ್ಥನ ಸಹಾಯವನ್ನು ಕೋರುತ್ತಾನೆ" ಎಂಬ ಜಾಹಿರಾತು.

———o———

# ಹು ರಿ ಗಾ ಳು

---

ಗಂಡ—ಹತ್ತುಸಾವಿರ ರೂಪಾಯಿಗೆ ಇನ್ಷ್ಯೂರ್ ಮಾಡಿ ಮೊದಲನೆಯ ಕಂತು ಪ್ರೀಮಿಯಂ ಕೂಡ ತೆತ್ತುಬಿಟ್ಟೆ. ಇನ್ನು ನಿರಾತಂಕವಾಗಿರಬಹುದು. ನಿಮ್ಮಗಳ ಯೋಚನೆ ಇಲ್ಲದೆ........

ಹೆಂಡತಿ—ಹಾಗಾದರಿನ್ನು ನೆಗಡಿ, ಕೆಮ್ಮಲು, ತಲೆನೋವು ಅಂತ ಗಳಿಗೆ ಗಳಿಗೆಗೂ ಡಾಕ್ಟರಿಗೆ ದುಡ್ಡು ಸುರಿಯಬೇಡಿ, ಅಂದ್ರೆ.

*   *   *

ರೇಡಿಯೋ ರಿಸೀವರನ್ನು ಕೊಂಡುಕೊಂಡಾಗ ಅವರು, "ಏನ್ರಿ! ಇದು ಷಾಕ್ ಗೀಕ್ ಹೊಡಿಯೋದಿಲ್ಲ ತಾನೆ?" ಅಂತ ಕೇಳಿದರೆ, ಅಂಗಡಿ ಮಾಲೀಕರು, "ಪ್ರೋಗ್ರಾಂ ಯಾವುದನ್ನಾದರೂ ಕೇಳಿದಾಗ ಷಾಕ್ ಹೊಡಿಯಬಹುದೇ ವಿನಃ ಇದರಲ್ಲೇನೂ ಮಿಸ್ಟೇಕ್ ಇಲ್ಲ" ಅಂದರಂತೆ.

*   *   *

"ಟೈಪ್ ರೈಟರ್‌ಗೆ ರಿಬ್ಬನ್ ತರಿಸುವುದಕ್ಕೆ ೩೫ ರೂ." ಎಂಬ ಖರ್ಚನ್ನು ಖಂಡಿಸಿ ಕಂಟ್ರೋಲರ್ ಆಫೀಸಿನವರೊಬ್ಬರು "ರೈಟರುಗಳಿಗೂ, ಟೈಪ್ ರೈಟರುಗಳಿಗೂ ಮನೆ ಹೆಂಗಸರ ಹೆರಳಿಗೆ ರಿಬ್ಬನ್ ಒದಗಿಸುವುದು ಸರ್ಕಾರದ ಕರ್ತವ್ಯವಲ್ಲ" ಎಂದು ಬರೆದರಂತೆ.

*   *   *

ಹೈದರಾಬಾದ್ ಸಂಸ್ಥಾನದ ವಿಸ್ತಾರವನ್ನು ವಿವರಿಸುತ್ತಾ ಮಿತ್ರರೊಬ್ಬರು, "ಅಲ್ಲಿ ಬೆಳಗ್ಗೆ ರೈಲಲ್ಲಿ ಕೂತರೆ, ರಾತ್ರಿಯಾದರೂ ಕೂಡ ಇನ್ನೂ ನಾವು ಸಂಸ್ಥಾನಾನೇ ಬಿಟ್ಟಿರುವುದಿಲ್ಲ" ಅಂದರು. ನಮ್ಮಲ್ಲೂ ಇಂತಹ ರೈಲುಗಳಿವೆ.

*   *   *

ಜವಾನ—ಬುದ್ಧಿ! ಡಾಕ್ಟರ್ ಬಂದಿದಾರೆ.

ಯಜಮಾನ—ಜ್ವರ, ಮಲಗಿದೇನೆ, ಆ ಮೇಲೆ ಬರಬೇಕಂತೆ, ಅನ್ನು, ಹೋಗು!

*   *   *

ಉಪನ್ಯಾಸಕ—"ಚಿಕ್ಕ ಮಕ್ಕಳನ್ನು ಶಾಲೆಗಳಲ್ಲಿ ಯದ್ವಾತದ್ವಾ ಹೊಡೆಯುತ್ತಾರೆ; ಉಪಾಧ್ಯಾಯರಿಗೆ ವಿದ್ಯಾಭ್ಯಾಸದ ಮೂಲ ತತ್ವಗಳೇ ತಿಳಿಯದು. 'ದಂಡಂ ದಶಗುಣಂಭವೇತ್' ಅಂತ ಅವರು ಶಾಸ್ತ್ರದ ಪಂಕ್ತಿಯನ್ನೇ ನಂಬಿ ನಮ್ಮ ಮಕ್ಕಳ ಬೆನ್ನು ಮೂಳೆಯನ್ನು ಮುರಿಯುತ್ತಾರೆ.......ನಾನು ಚಿಕ್ಕ ಹುಡುಗನಾಗಿದ್ದಾಗ ನನ್ನನ್ನೂ ಕೂಡ ನಮ್ಮೂರು ಮೇಷ್ಟರು ಒಂದು ಸಾರಿ, ನಾನು ನಿಜ ಹೇಳಿದ್ದಕ್ಕೆ, ನನ್ನನ್ನು ಸಿಕ್ಕಾಪಟ್ಟೆ ಹೊಡೆದರು .......

ಸಭಿಕ—ಅವತ್ತಿನಿಂದ ನೀವು ಆ ಅಭ್ಯಾಸಾನ ಬಿಟ್ಟಿದೀರಲ್ಲಾ........ಅವರು ಹೊಡೆದದ್ದು ಒಳ್ಳೇದೇ ಆಯಿತಲ್ಲವೇ?

* * *

ಪ್ರಶ್ನೆ—ಪಾರ್ಕಿನಲ್ಲಿ ಆತನ ಶಿಲಾಪ್ರತಿಮೆಯನ್ನ ಕಲ್ಲು ಕುದುರೆಯ ಮೇಲೆ ಏಕೆ ನಿಲ್ಲಿಸಿದಾರೆ?

ಉ—ಹುರುಳಿ ಉಳಿಸುವುದಕ್ಕಾಗಿ.

* * *

ಮಿತ್ರಾ, ಹತ್ತು ರೂಪಾಯಿ ಸಾಲಕೊಟ್ಟರೆ ನಾನು ನಿನಗೆ ಚಿರಋಣಿಯಾಗಿರುತ್ತೇನೆ.

ಇತಿ................

—o—

# ಚಿತ್ರ-ಕನ್ನಡ

(ವಿಮರ್ಶೆ)

ಶನಿ ಸ್ಟುಡಿಯೋಸ್‌ನ ಸದ್ಯದ ಚಿತ್ರವಾದ 'ಅನಿಷ್ಟ' ಮುಗಿತಾಯ ಸ್ಥಿತಿಯಲ್ಲಿದೆ. ಚಿತ್ರದ ಬಗ್ಗೆ ಹೇಳಿಕೆಗಳು ಬಹಳ ಉತ್ತೇಜನಪೂರಿತವಾಗಿವೆ. ನಾಟ್ಯಗಾತಿ ಖಾರಂರವರೂ 'ಗುಬ್ಬಚ್ಚಿ' ಖ್ಯಾತಿ ನಟನಟೀ ವೃಂದವೂ ತಾರಾಭೂಮಿಕೆಯಲ್ಲಿದಾರೆ. ಅಲ್ಲದೆ ತಮಿಳುನಾಡನ್ನೆಲ್ಲಾ ತಲೆದೂಗಿಸಿದ, ಅದರಲ್ಲೂ ಸ್ವಭಾವತಃ ಗಾನಕಲಾಕೋವಿದರಾದ ನಾಟ್ಯಕೋಟ್ಯಿ ಶೆಟ್ಟಿಯಾರ್ರುಗಳನ್ನು ಸೂರೆಮಾಡಿದ ಭಾಗವತರುಗಳು ಚಿತ್ರೋದ್ಯಮದಲ್ಲಿ ಪಾಲ್ಗೊಂಡಿದಾರೆ. ಕತೆಯ ಯಶಸ್ವಿತೆಯನ್ನು ನಿರ್ದೇಶಕರು ತಮ್ಮ ವ್ಯಕ್ತಿತ್ವದಿಂದ ಭಾವನಾಚಿತ್ರ ತರಂಗಿಣಿಯಾಗಿ ರೂಪಾಂತರಗೊಳಿಸಿ ಚಿತ್ರನಾಟ್ಯವನ್ನು ಚೆನ್ನಾಗಿ ರಚಿಸಿರುವುದರಿಂದ "ಅನಿಷ್ಟ" ಕನ್ನಡ ಚಿತ್ರಗಳಿಗೆ ಇದುವರಿಗಾಗದ ಒಂದು ಹೊಸ ಮಟ್ಟವನ್ನೇ ಸಂಪಾದಿಸುತ್ತದೆ ಎಂಬುದು ನಿರ್ವಿವಾದವಾದ ಸಂಗತಿ. ಕನ್ನಡ ಚಿತ್ರಗಳ ಪ್ರಗತಿಯನ್ನು ಕುರಿತು ನಾವಿನ್ನು ಬೆದರಿಕೆಗೆ ಸೊಪ್ಪು ಹಾಕುತ್ತ ಕುಳಿತಿರಬೇಕಾಗಿಲ್ಲ! 'ಅನಿಷ್ಟ'ದ ಮತ್ತೊಂದು ವಿಶೇಷವೇನೆಂದರೆ, ಇತ್ತೀಚೆಗೆ ವಾಕ್ಚಿತ್ರ ವಿಮರ್ಶನಾ ಪ್ರಪಂಚದಲ್ಲಿ ತಾಂಡವವಾಡುತ್ತಿರುವ ಅಶ್ಲೀಲತಾ ಪ್ರಸಾರವಾದ, ಚುಂಬನಾವಾದ ಮುಂತಾದ ಜಿಜ್ಞಾಸೆಗಳನ್ನು ಧೂಕರಿಸಿ ಇದರ ದಿಗ್ದರ್ಶಕರು ಭಾರತದ ಖ್ಯಾತಿ ಶಿಖರವನ್ನು ಕಟ್ಟಿದಾರೆ. ಮೇಲುನೋಟಕ್ಕೆ 'ಅನಿಷ್ಟ' ಅನಾಹುತ ಪರಂಪರೆಯ ಪ್ರಣಯಲಹರಿಯ ಪ್ರೇಮವಲ್ಲರಿ. ಆದರೂ, ಅದು ಅತ್ಯಂತ ರಂಜಕ ಯೋಗ್ಯವೆನಿಸಿದೆ. ವಿಚಾರದ ಮೆಲುಕಿಗೂ ವಿಷಾದದ ನಿಟ್ಟುಸಿರಿಗೂ ಅವಕಾಶವಿಲ್ಲದೆ ಇಲ್ಲ. ಉದ್ಘಾತ ಹಾಗೂ ಅನದ್ಘಾತ ವೈಖರಿಗಳೆರಡರಿಂದಲೂ ದಿಗ್ದರ್ಶಕರು ಅಪುಷ್ಟವಾದದ್ದನ್ನು ಅಸ್ಪಷ್ಟಮಾಡಿ ತಮ್ಮದೇ ಆದ ಒಂದು ನವೀನ ವೈಶಿಷ್ಟ್ಯದಿಂದ ದಿಗ್ದರ್ಶಿಸಿದ್ದಾರೆ. 'ಅನಿಷ್ಟ'ದ ಕೈಗಾರಿಕಾ ಕಾರ್ಯವರ್ಗದಲ್ಲಿ ಸುಪ್ರಸಿದ್ಧ ಛಾಯಾ ಚತುರರಾದ ಶ್ರೀವರ್ಮಾ ಜಾಪಾಳ ಅವರು ಕೆಲಸಮಾಡಿರುವುದರಿಂದ ಬಿಂಬಗ್ರಾಹಕತೆ ಮೊದಲಾದ ಅವರ ಕೈವಾಡದ ತಾಂತ್ರಿಕ ಭಾಗವು ಉದ್ರೇಕ ಪೂರ್ಣವಾಗಿದೆ. 'ಅನಿಷ್ಟ'ದಲ್ಲಿ ಬರುವ "ಹಸ್ದು ಹಸ್ದು ಬಿದ್ದೋ ಬೇಟಾ! ಅಕ್ಕೀ ನಹೀ ಮಿಲಾ" ಎಂಬ ಹಾಡೂ "ಏಕ್ ಮಸಾಲಾ, ದೋ ಚಟನೀ" ಎಂಬ ಹಾಡೂ ಅಖಂಡ ಕರ್ಣಾಟಕದ ಆಬಾಲಗೋಪಾಲರ ಗಂಟಲ ಭೂಷಣವಾಗುವುದರಲ್ಲಿ ಸಂದೇಹವಿಲ್ಲ.

ಬೆಂಗಳೂರಿನಲ್ಲಿ 'ಅನಿಷ್ಟ'ದ ಪ್ರಥಮ ಪ್ರದರ್ಶನದ ದಿನ ಚಿತ್ರ ತಯಾರಿಕಾಗಾರರಲ್ಲಿ ಪ್ರಮುಖರಾದ ಡಾ|| ಶನಿ ಅವರು ಬಹಿರಂಗವಾಗಿ ತಮ್ಮ ಟೋಪಿಗೆ ಪುಕ್ಕ ಅಂಟಿಸಿಕೊಳ್ಳುವರೆಂದು ಗೊತ್ತಾಗಿದೆ. ಮಾನ್ಯಮಹನೀಯರನೇಕರಿಗೆ ಈ ಸಮಾರಂಭಕ್ಕೆ ಅಧ್ಯಕ್ಷರಾಗುವಂತೆ ಆಹ್ವಾನ ಕಳುಹಿಸಲಾಗಿದೆಯಂತೆ.

('ಅನಿಷ್ಟ'ದ ಪ್ರಕಟಣಾಧಿಕಾರಿಗಳಿಂದ ಬರೆದುಬಂದದ್ದು.)



✱

# ಪ್ರಶ್ನೋತ್ತರ ಕಾಲ
(ಮಿಡ್ಲಿಸ್ಕೂಲಿನಲ್ಲಿ)

---

ಪ್ರ—ಮೈಸೂರು ದೇಶದಲ್ಲಿ ಭೂವಿವರಣೆ ಗೊತ್ತೆ?

ಉ—ಗೊತ್ತು.

ಪ್ರ—ಮೈಸೂರು ದೇಶದ ಮುಖ್ಯ ನದಿಗಳು ಯಾವುವು?

ಉ—ಕಾವೇರಿ, ತುಂಗಭದ್ರಾ.

ಪ್ರ—ಕಾವೇರಿ ಕವೇರ ಮಹರ್ಷಿಗಳ ಮಗಳೇ?

ಉ—ಪ್ರಶ್ನೆ ಸ್ಪಷ್ಟವಾಗಿಲ್ಲ.

ಪ್ರ—ಕವೇರ ಮಹರ್ಷಿಗಳು ಕೊಡಗಿನವರಲ್ಲವೇ?

ಉ—ನೋಟೀಸ್.

ಪ್ರ—ಅವರ ಕಮಂಡಲು ಮಗುಚಿಕೊಂಡಿತೆ?

ಉ—ನೋಟೀಸ್

ಪ್ರ—ಆಗ ಕಾವೇರಿ ಉದ್ಭವಿಸಿದಳೆ?

ಉ—ನೋಟೀಸ್

ಪ್ರ—ಕಾವೇರಿಯಷ್ಟು ದೊಡ್ಡ ನದಿ ಭಾರತದಲ್ಲಿ ಬೇರೆ ಯಾವುದಾದರೂ ಇದೆಯೇ?

ಉ—ಇರಬಹುದು.

ಪ್ರ—ಇಂಡಿಯಾ ದೇಶದ ಭೂವಿವರಣೆಯನ್ನು ಓದಿಲ್ಲವೆ?

ಉ—ಸಾರ್ವಜನಿಕ ದೃಷ್ಟಿಯಿಂದ ಈಪ್ರಶ್ನೆಗೆ ಉತ್ತರ ಕೊಡಲು ಸಾಧ್ಯವಿಲ್ಲ

ಪ್ರ—ಮೈಸೂರು ಸಂಸ್ಥಾನದಲ್ಲಿ ಕಾವೇರಿ ಎಷ್ಟುಸಲ ಧುಮುಕುತ್ತಾಳೆ(ನಗು)

ಉ—ಪ್ರಶ್ನೆ ಸ್ಪಷ್ಟವಾಗಿಲ್ಲ. ಯಾವ ಕಾವೇರಿ ಎಂದು ನಿರ್ದಿಷ್ಟವಾಗಿ ತಿಳಿಸಿದರೆ ಉತ್ತರ ಕೊಡಲಾಗುವುದು.

ಪ್ರ—ಕಾವೇರಿ ನದಿಯಲ್ಲಿ ಜಲಪಾತಗಳೆಷ್ಟು?

ಉ—ಗೊತ್ತಿಲ್ಲ.

ಪ್ರ—ಶಿವನ ಸಮುದ್ರದ ಆಳವೆಷ್ಟು?

ಉ—ವಿಚಾರಿಸಿ ತಿಳಿಸಲಾಗುತ್ತದೆ.

ಪ್ರ—ಶ್ರೀರಂಗಪಟ್ಟಣದಲ್ಲಿ ಕಾವೇರಿ ಕವಲೊಡೆಯಲು ಕಾರಣವೇನು?

ಉ—ಅಡ್ಡವಾಗಿ ದೇವರು ಮಲಗಿರುವುದರಿಂದ.

ಪ್ರ—ದೇವರು ಮಲಗಿರುವುದು ಯಾವ ಕಾರಣದಿಂದ? ಮಲೇರಿಯಾ ದಿಂದಲೇ?

ಉ—ಇರಬಹುದು.

ಪ್ರ—ಕಾವೇರಿ ನೀರಿನಿಂದ ವ್ಯವಸಾಯಕ್ಕೆ ಪ್ರಯೋಜನವಾಗಿದೆಯೇ?

ಉ—ಇದು ಕೇವಲ ಅಭಿಪ್ರಾಯದ ಮಾತು

ಪ್ರ—ಕನ್ನಂಬಾಡಿಯಲ್ಲಿ ಒಂದು ಕಟ್ಟೆ ಇದೆಯೇ?

ಉ—ಗೊತ್ತಿಲ್ಲ

ಪ್ರ—ಅದನ್ನು ಅಲ್ಲಿ ಇಟ್ಟವರು ವಿಶ್ವೇಶ್ವರಯ್ಯನವರೇ?

ಉ—ವಿಚಾರಿಸಲಾಗುತ್ತದೆ

ಪ್ರ—ಅಲ್ಲಿಯ ನೀರಿನ ಮಟ್ಟವನ್ನು ಮದ್ರಾಸ್ ಗವರ್ನರಿಗೆ ತಿಳಿಸಬೇಡವೇ?

ಉ—ಇದು ಕೇವಲ ಸಲಹೆ ಮಾತ್ರ; ತಿಳಿಸಿದರೆ ತಿಳಿಸಬಹುದು.

ಪ್ರ—ಹೊಳೆ ನೀರಿಗೆ ಬಿಳಿನಾಯಕನ ಅಪ್ಪಣೆಯಾಕೆ?

ಉ—ಮದ್ರಾಸ್ ಗವರ್ನರನ್ನು 'ಬಿಳಿ' ಎಂದು ಹೇಳುವುದು ಕೇವಲ ಅಭಿಪ್ರಾಯ.

ಪ್ರ—ಪಶ್ಚಿಮವಾಹಿನಿಯಲ್ಲಿ ನಿಜವಾಗಿಯೂ ನೀರು ಪಶ್ಚಿಮಕ್ಕೆ ಹರಿಯುತ್ತಿದೆಯೇ?

ಉ—ಗೊತ್ತಿಲ್ಲ

ಪ್ರ—ವಿಚಾರ ಮಾಡಲಾಗುವುದೇ?

ಉ—ಅವಶ್ಯಕತೆ ಕಂಡುಬಂದಲ್ಲಿ ಮಾಡಲಾಗುವುದು.

ಪ್ರ—ತಲಕಾಡಿನಲ್ಲಿ ಮರಳಿದೆಯೇ?

ಉ—ನೋಟೀಸ್

ಪ್ರ—ಅದು ಶಾಪದಿಂದಾದ ಮರಳೇ?

ಉ—ನೋಟೀಸ್

ಪ್ರ—ಕಾವೇರಿ ನೀರನ್ನು ಪ್ರಯೋಗಿಸುವ ಜನರು ಬಹುಮಂದಿ ತಮಿಳರೇ?

ಉ—ನೋಟೀಸ್

ಪ್ರ—ಕಾವೇರಿ ನೀರು ಕಡೆಗೆ ಎಲ್ಲಿಗೆ ಹೋಗುತ್ತೆ?

ಉ—ಬಂಗಾಳಾ ಕೊಲ್ಲಿಗೆ

ಪ್ರ—ಕನ್ನಡನಾಡಿನ ನೀರು ಬಂಗಾಳಿಗಳ ಬಾಯಿಗೆ ಬೀಳಬಹುದೆ?

ಉ—ಇದನ್ನು ಮತ್ತೊಮ್ಮೆ ಪರಿಶೀಲಿಸಲಾಗುವುದು.

—"ನ್ಯಾವಿ."

——o——




"ಬರ್ತಿಯೇನಪ್ಪ ಮಾರ್ಕಟ್ಟಿಗೆ"

"ಯಾವ ಮಾರ್ಕಟ್ಟಿಗೆ ಸಾಮಿ"

"Black ಮಾರ್ಕಟ್ಟಿಗೆ"

# ❧ ನವೀನ ಗಾದೆಗಳು ❧

("ಇಟಾಲಿಯನ್ನರದು")

---

ತೋಳ ಹಳ್ಳಕ್ಕೆ ಬಿದ್ದರೆ, ಆಳಿಗೊಂದು ಸುದ್ದಿ ಹೊರಡಿಸೋದೇ.

*　　　　*

ರಾಜಗೆ ರಾಜ್ಯ ದೊರೆತರೆ,—ನಮಗೆ ಅಡಿಗೆ ಮಾಡೋದು ತಪ್ಪೀತೆ.

*　　　　*

ಒಂದಲ್ಲ ಇಟಲಿಗೆ,—ಬಂದರೆಲ್ಲಾ ಬೇನೆ.

*　　　　*

ದೇಶ ಕೊಡಿಸುಕ್ಕೆ ಆತನ್ನ ಕರೆದರೆ,—ಆತನ್ನೋಡಿಸುಕ್ಕೆ ಅರೆಜೀವ ಆಯ್ತು.

*　　　　*

ಹೊತ್ತಲ್ಲದ ಹೊತ್ತಿನಲ್ಲಿ, ಹಿಟ್ಲರು ಕೈಬಿಟ್ಟನೇ ?

*　　　　*

ನಮ್ಮೂರು ಹೋಟಲಿನಲ್ಲಿ ತಮಿಳಿನವನು ಕೂಗಿದ "ಇಟಲಿ ಚಟ್ನಿ. ಇಟಲಿ ಚಟ್ನಿ" ದಿಟವೇ ಆಯಿತು.

*　　　　*

ಮಧುರೆ ಮೀನಾಕ್ಷಿ—ಕಂಚಿ ಕಾಮಾಕ್ಷಿ—ಇಟಲಿ ವಿಮಾನಾಕ್ಷಿ.

*　　　　*

ಸಿಸ್ಸಿಲಿ ಮೇಲೆ ಹೊಡೆದರೆ,......ಮುಸ್ಸಲಿನಿ ಹಲ್ಲು ಮುರಿಯಿತು.

*　　　　*

ಇರಳು ಕಂಡ ವಿಮಾನ, ಹಗಲಲ್ಲೇ ಧಾಳಿ ಮಾಡೀತೇ.

*　　　　*

ಬರ್ಲಿನ್ನೊಳಗಿದ್ದ ನಮ್ಮಾವ ಕಬ್ಬಿಣದ ರೈಲಲ್ಲಿ
ರಾಶಿ ರಾಶಿ ಸೈನ್ಯ ತರ್ರೋಕ್ ತುಂಬಿದ ಗಾಡೀಲಿ.
ಬಂದ ಸೈನ್ಯವೆಲ್ಲಾ ಹಿಡಿದು
ರೋಂನವರೆಲ್ಲಾ ಹಠತೊಟ್ಟು
ಭಾವನ್ನುಬ್ಬಿಗೆ ಹಾಕಿಬಿಟ್ಟು
ಸಾವೇ ಲೇಸು ಎನ್ನಿಸಿಬಿಟ್ಟು
ಮೂಲೇಲ್ಕೂತ ನಮ್ಮಾವ.

——o——

# ಭದ್ರಾವತಿ ಕುದುರೆ

ಭದ್ರಾವತಿ ಸ್ಟೇರ್ಷ ಒಳಗೆ ರೆಯಿಲು ನಿಲ್ಲುತ್ತಲೂ ನಾನು ಮಾಮೂಲಿನಂತೆ ಕಿಟಕಿಯಾಚೆ ತಲೆ ತೂರಿಸಿದೆ. ನಿಮ್ಮ ಕಣ್ಣಿಗೆಲ್ಲಾವ ಕಾರ್ಖಾನೆ ಚಿಮ್ನಿಣಿ ಬಡಿದರೆ ನನ್ನ ಕಣ್ಣಿಗೆ ಬಿದ್ದದ್ದು ಒಂದು ಕುದುರೆ. ಅಲ್ಪ ಪ್ರಾಣದ್ದು. ಕಂಬಿ ಸಂದೀಲಿ ಹುಟ್ಟಿಕೊಂಡಿದ್ದ ಹುಲ್ಲುಕಡ್ಡೀನ ಜಗ್ಗಿಸಿ ಎಳೀತಿತ್ತು. ಆಗ ನನಗೆ ಜೈಮುನಿ ಜ್ಞಾಪಕಕ್ಕೆ ಬಂತು.

ಜೈಮುನಿ ಅಂದ್ರೆ ನನಗೆ ಜೇತುಪ್ಪ ತಿಂದ ಹಾಗೆ! ನಮ್ಮ ಹಿರೇರು ನಮ್ಮೂರಾಗೆ ಒಂದು ಕಟ್ಟು ಮಾಡಿಟ್ಟಿದ್ದರು. ಜೈಮುನಿ ಓದೋಕೆ ಬಾರದ ಹೈದನಿಗೆ ಹೆಣ್ಣು ತರಕೂಡದು, ಅಂತ. ಇವತ್ತಿಗೂ ಅಂಥಾ ರೂಲೀಸನ್ನ ಎಲ್ಲ ಕಡೆಗೂ ತಂದುಬಿಟ್ಟರೆ ಅಕ್ಷರಾನ ಹಳ್ಳಿಹಳ್ಳಿಗೂ ಹೊತ್ತುಕೊಂಡು ಹೋಗಿ ಪ್ರಚಾರ ಮಾಡಬೇಕಾಗಿಯೇ ಇಲ್ಲ. ಕುದುರೆ ನೋಡಿ ಜೈಮುನಿ ನೆನಸಿಕೊಂಡು ಕಣ್ಣಲ್ಲಿ ಒಂದು ತೊಟ್ಟು ನೀರು ಬಿಟ್ಟೆ. ಬೇರೆ ಯಾರೂ ಹಾಗೆ ಮಾಡುವುದಿಲ್ಲ, ನಿಜ. ಈಗೇನು, ಅರವತ್ತು ವರ್ಷದ ಅರಳು ಮರಳಾದರೂ ಕೂಡ ಅವನಿಗೆ ಭದ್ರಾವತಿ ಕುದುರೇನೂ ಒಂದೇ, ಬಾಣಾವರದ ಕುದುರೇನೂ ಒಂದೇ! ವೆತ್ಯಾಸಾನೇ ಗೊತ್ತಾಗದು! ನನ್ನ ಡಬ್ಬಿಯೊಳಗೆ ಅಂಥಾವನೊಬ್ಬ ಇದ್ದ. ಇದ್ಯಾಕಪ್ಪಾ ಹಿಂಗೆ ಕಣ್ಣೀರು ಬಿಟ್ಟೇರಿ ಅಂದ. ನೀನು ಜೈಮುನಿ ಓದಿಲ್ಲವಾ, ಅಂದೆ. ಜೈಮುನೀನೂ ಕಾಣೆ, ಜಡೆಮುನೀನೂ ಕಾಣೆ, ಅಂದ ನಾಚಿಕೆಯಿಲ್ಲದೆ. ಸರಿ, ಬೀರೂರು ತನಕ ಹೇಳಿದೆ, ಅವನಿಗೂ ಅಲ್ಲಿದ್ದ ನಾಲ್ಕಾರು ಜನಕ್ಕೂ,—ಜೈಮುನಿ ಹೇಳಿರೋ ಭದ್ರಾವತಿ ಕುದುರೆ ಕಥೇನ.

ಇತ್ತಲಾಗೆ ಪಾಂಡವರು ಅತ್ತಲಾಗೆ ಕೌರವರು ನಿಂತುಕೊಂಡು ಕಾಳಗ ಮಾಡಿದ್ದು, ಕಡೆಮ್ಯಾಗೆ ಐದು ಸಿಂಹಾಸನ ಮಾಡಿಸಿಕೊಂಡು ಪಂಚಪಾಂಡವರು ಕುಂತಿದ್ದು, 'ಎಲಾ ಮುದುಕರು ಮೋಟರು ಹಾರವರು ಹುಡುಗರು ಎಲ್ಲಾನೂ ವೇ ಒಂದೇ ಏಟಿಗೆ ತೀರಿಸಿದೆನಲ್ಲಾ ಪಾಪಿ' ಅಂತ ಆ ಧರ್ಮರಾಯ ಕೊರಗಿದ್ದು, ಆ ಮೇಲೆ ಆ ಬಾದ್ರಾಮಾಯಣ ಮುನಿಗೋಳು ಅಸ್ಮೇಧ ಮಾಡಿದರೆ ಪಾಪಾನೆಲ್ಲ ತೊಳೆದುಹಾಕಿಬಿಡಬಹುದು ಅಂತ ಏಳಿದ್ದು, ಅದಕ್ಕೆ ಲಾಯಕ್ಕಾದ ಕುದುರೆ ಎಲ್ಲೈತೆ ಅಂತ ರಾಜ ಕೇಳುತ್ತಲೂ ಮೈಸೂರು ಸೀಮೇಲಿ ಭದ್ರಾವತೀಲಿ ಸೊಗಸಾದ ಕುದುರೆ ಇದೆ, ಬಲಿ ಕೊಡೋಕ್ಕೆ ಅದೇ ಸರಿ ಅಂತ ಏಳಿದ್ದು, ಭೀಮಪ್ಪಾನೂ ಅವನ ಮೊಮ್ಮಗಾನೂ ಅವನ ಅಣ್ಣ ಕರ್ಣನ್ ಮಗಾನೂ ಒರಟಿದ್ದು, ಎಲ್ಲಾನೂ ವಿವರಿಸೋ ಹೊತ್ಗೆ ತರೀಕೆರೆ ಬಂತು. ಗಂಟಲೊಣಗುತ್ತಾ ಇದೆಯಲ್ಲಾ, ಒಸಿ ಬಸ್ಕೊಳ್ಳಿ ಅಂತ ಒಂದಿಷ್ಟು ಕಾಪಿ ತರಿಸಿಕೊಟ್ಟರು, ಪುಣ್ಯಾತ್ಮರು, ಕಿವಿಯಾಡಿಸುತ್ತಾ ಕೇಳುತ್ತಿದ್ದೋರು! ಕುಡಿದೆ.

ಇಬ್ಬರು ಹೈಕಳನ್ನೂ ಭೀಮಪ್ಪ ಭದ್ರಾವತಿ ಮೂಡಲಾಗಿರೋ ದಿಣ್ಣೆ ಮೇಲೆ ಕೂರಿಸಿಕೊಂಡು, ನೋಡ್ರೋ, ಹೊಳೆ, ಕೆರೆ, ತೋಟ, ತೋಪು, ಊರು, ಕೇರಿ, ಹಳ್ಳ, ಕುಂಟೆ, ಜುಂಬಿಬಾತ್ ಕೋಳಿ, ಮಲ್ಲಿಗೆ ಬಳ್ಳಿ, ಮಾವಿನ ಮರ, ಅಂತ ಒಂದೊಂದಾಗಿ ಏಳಿದ್ನಂತೆ, ಜೈಮುನೀಲಿದೆ. "ಎತ್ತಲುಂ ಗಗನದೆಡೆಗೇಳ್ವ ಓಮಧೂಮಂ" ಅಂತ ಜೈಮುನಿ ಕಾರ್ಖಾನೆ ಚಿಮ್ಣಿ ಒಗೇನೂವೇ ವಿವರಿಸಿದಾನೆ. ಕಬ್ಬಿಣದ ಕಾರ್ಖಾನೆ ಒಗೆ, ನೂರಾರು ಬ್ರಾಮರು ಸೇರಿಕೊಂಡು ಓಮ ಮಾಡಿದ್ದಂಗೆ ಇತ್ತಂತೆ ದೇವತೆಗೊಳ್ಗೆ! ಬೆಂಕಿಪುರ ಅಲ್ಲವಾ ಭದ್ರಾವತಿ! ಕುಲುಮೆ ತೆರೆದು ಕಾದು ಕರಗಿದ ಕರೀ ಹೊನ್ನು ಈಚೆಗೆ ಒಳೆಯಾಗಿ ಹರಿವಾಗ, ಜೈಮುನಿ ಏಳ್ತಾನೆ, ಉಜ್ವಲ ಜೋತಿರ್ಲತೆಯೋ, ಅಂತಾನೆ ಅಂದೆ.

ಹಾಗಾದ್ರೆ ನಮ್ಮ ಭದ್ರಾವತಿ ಅಷ್ಟೊಂದು ಪುಣ್ಯ ಪಡೆದ ಊರಾ, ಅಂದ್ರು. ಊ, ಅಂದೆ. ಧರ್ಮರಾಯನ ಅಸ್ಮೇಧಕ್ಕೆ ಕುದುರೆ ಕೊಟ್ಟ ಊರು, ಅಂದೆ. "ಭದ್ರಾವತೀಲಿ ನಾವು ಕಾಣದ ಕುದುರೆ ಅದೆಂಥಾದ್ದಪ್ಪ?" ಅಂದ್ರು, ಒಬ್ಬರು. ಜೈಮುನೀಲಿ ಬರುತ್ತೆ, ಭದ್ರಾವತೀಲಿ ಭೀಮಪ್ಪ ಕಂಡ ಕುದುರೆ ಬೆಚ್ಚಬಿಳಿ, ಬಾಲ ಮಾತ್ರ ಅಚ್ಚ ಅಸುರು ಒಂದೇ ಒಂದು ಕಿವಿ ಕಪ್ಪು......ಇವತ್ತು ನಾನು ಸ್ಟೇಷನ್ನಲ್ಲಿ ಕಂಡ ಕುದುರೆ ಕೂಡ ಅಪ್ಪಟ ಬಿಳಿ, ಒಂದೇ ಒಂದು ಕಿವಿ ಕೊಂಚ ಕಪ್ಪು! ಬಾಲಾನ ಉಲ್ಲಿನ್ ರಸದಲ್ಲಿ ಅದ್ದಿದರೆ ಅಸುರಾಗುತ್ತೆ ಅನ್ನಿ. ಅದನ್ನೂ ಯಾರಾದರೂ ಪರದೇಶದವರು ಬಂದು ಒಡಕೊಂಡು ಓಗ್ತಾರಲ್ಲಾ, ಬಲಿ ಕೊಡೋಕೆ, ಅಂತಅನ್ನಿಸಿತು. ಅದಕ್ಕೇ ನನ್ನ ಕಣ್ಣಲ್ಲಿ ನೀರು ಬಂದದ್ದು ಅಂದೆ.

ಬೀರೂರು ಬಂತು. ನನ್ನ ದಾರಿ ನಾನು ಹಿಡಿದೆ, ಅವರೆಲ್ಲ ಅಲ್ಲೇ ಕಂಬನಿ ಸುರಿಸುತ್ತಾ ಕುಳಿತಿದ್ದರು.

—ಶ್ರೀ ಕೃಷ್ಣಪ್ರಿಯ.

---

# ಶುಂಠೈಯ್ಯನ ಶೂರತ್ವ

---

"ಎರಡು ಇಡ್ಲಿ, ಮೂರು ಬೆಣ್ಣೆ! ಚಟ್ನೀ ಬೇರೆ ತಟ್ಟೆಯಲ್ಲಿ!—ಬೇಗ ತರ ಬೇಕು......." ಈ ಕೂಗು ಕೇಳಿಸಿದ ಒಡನೆಯೇ ನಮಗೆ ಗೊತ್ತು—ಭೀಮಣ್ಣನು ಹಾಜರಾದನೆಂದು. ಬ್ರಹ್ಮೇಂದ್ರ ಭವನದ ಮೂರನೇ ಮಹಡಿಯಲ್ಲಿ ನಿತ್ಯವೂ ನಾವು ಕೆಲವರು ಸೇರುವ ಪದ್ಧತಿ. ನಮ್ಮ ಕೂಟಕ್ಕೆ ಭೀಮಣ್ಣನೇ ಅಧ್ಯಕ್ಷ. ಅವನಿರಬೇಕಾದರೆ ಮತ್ತಾರಿಗೂ ಮಾತಾಡಲು ಅವಕಾಶ ಸಿಗದು. ಏನೋ, ಮಧ್ಯೆ ಮಧ್ಯೆ ನಾವು ಯಾರಾದರೂ ಒಂದೊಂದು ಮಾತು ನುಗ್ಗಿಸಬಹುದು. ಮುಖ್ಯವಾಗಿ ಅವನಿಗೆ "ಹೂಂ" ಕೊಡುವುದೇ ನಮ್ಮೆಲ್ಲರ ಕರ್ತವ್ಯ!

ಮೂರನೆಯ ಮಹಡಿಗೆ ಭೀಮಣ್ಣನು ತನ್ನ ಸ್ಥೂಲವಾದ ಶರೀರವನ್ನು ಏದುತ್ತಾ ಏದುತ್ತಾ ಸಾಗಿಸಿಕೊಂಡು ಬರಬೇಕು. ಎಲ್ಲಿ ಕಾಲವಿಳಂಬವಾಗು ವುದೋ ಎಂದು ಎರಡನೇ ಮಹಡಿಯಿಂದಲೇ ಇಡ್ಲಿ ಬೆಣ್ಣೆಗಳಿಗೆ ಅವನ ಆಜ್ಞೆ. ಅವನ ಕಹಳೆಯ ಕೂಗನ್ನು ಕೇಳಿದೊಡನೆ ಮಾಣಿ, ಗಣೇಶಯ್ಯನೂ ಸಹ ಎಲ್ಲಿಯೂ ಇಲ್ಲದ ಸಡಗರ. ಭೀಮಣ್ಣನು ಮೇಲೆ ಬಂದು ತನ್ನ ಮಾಮೂಲು ಕುರ್ಚಿಯಲ್ಲಿ ಬೆವರು ಒರಸಿಕೊಳ್ಳುತ್ತಾ ಕೂಡುವ ವೇಳೆಗೆ ಬೆಣ್ಣೆ ಇಡ್ಲಿ ಇತ್ಯಾದಿ ಗಳು ಸಿದ್ಧ! ಇಡ್ಲಿಗೆ ಬೆಣ್ಣೆ ಚಟ್ನಿಗಳನ್ನು ಸಮನಾಗಿ ಸವರಿ ಒಂದೆರಡು ತುತ್ತು ಬಾಯಿಗೆ ಸೇರಿಸಿದನಂತರ ಮಾತು; ಅದುವರೆಗೆ ಅವನು ಮಾತನಾಡುತ್ತಿರಲಿಲ್ಲ. ಅವನನ್ನು ಮಾತನಾಡಿಸುವುದಕ್ಕೆ ನಾವೂ ಯಾರೂ ಸಾಹಸಪಡುತ್ತಿರಲಿಲ್ಲ.

ಈ ದಿನವೂ ಭೀಮಣ್ಣನು ಯಥಾ ಪ್ರಕಾರ ಒಂದೆರಡು ತುತ್ತು ನುಂಗಿದ ನಂತರ "ಬೆಣ್ಣೆ ಸ್ವಲ್ಪ ವಾಸನೆ" ಎಂದನು.

ಒಂದಿಡ್ಲಿ, ಒಂದು ಬೆಣ್ಣೆಯ ಶಿಷ್ಯನೊಬ್ಬನು "ಹೌದು ಇಡ್ಲಿಯೂ ಬರ ಬರುತ್ತಾ ಸಣ್ಣದಾಗುತ್ತಲಿದೆ" ಎಂದನು.

ಖಾಲಿದೋಸೆ ತುಪ್ಪದ ಕಪ್ಪಣ್ಣನು "ದೋಸೆ ಸಹ ತೆಳುವಾಗಹತ್ತಿದೆ" ಎಂದನು.

ಭೀಮಣ್ಣನು "ಇದೆಲ್ಲಾ ಕಾಲಮಹಿಮೆ. ಸಣ್ಣದಾಗುವುದು ಸಣ್ಣದಾಗು ತ್ತಲೇ ಹೋಗುತ್ತಿದೆ, ದೊಡ್ಡದು ದೊಡ್ಡದಾಗುತ್ತಲೇ ಹೋಗುತ್ತಿದೆ!" ಎಂದನು.

ಈ ಗಂಭೀರವಾದ ವಿಚಾರ ಪೂರಿತವಾದ ಅಭಿಪ್ರಾಯವನ್ನು ಕೇಳಿ ನಾವೆಲ್ಲ ಮಾತಿಲ್ಲದವರಾದೆವು. ಎಲ್ಲರ ಮುಖದ ಮೇಲೆಯೂ ಯೋಚನಾಪರತೆಯ

ಮುದ್ರೆ! ಖಾರಾ ಬೂಂದಿಯ ಕುಳ್ಳಪ್ಪನೂ ಸಹ ಅಗಿಯುವುದನ್ನು ನಿಲ್ಲಿಸಿದನು. ಎಲ್ಲರ ದೃಷ್ಟಿಯೂ ಭೀಮಣ್ಣನ ಮೇಲೆ ನೆಟ್ಟಿತು. ಹೀಗೆ ಒಂದೊಂದು ವಾಕ್ಯ ದಿಂದಲೇ ಅವನು ಎಲ್ಲರ ಗಮನವನ್ನೂ ಸೆಳೆದುಬಿಡಬಲ್ಲನು!

ಮತ್ತೊಂದು ಚೂರು ಇಡ್ಲಿಯನ್ನು ತಿಂದು, ಒಂದು ಗುಟುಕು ನೀರು ಕುಡಿಯುತ್ತಾ, "ಹೌದು, ಈಗ ನೋಡಿ, ಈ ದೋಸೆ, ಇಡ್ಲಿ ವಗೈರೆಗಳು ಬರ ಬರುತ್ತಾ ಚಿಕ್ಕವಾಗುತ್ತಲಿವೆ—ಆದರೆ, ಈ ಬ್ರಹ್ಮೇಂಪ್ರಭವನವೋ ಗಗನಕ್ಕೆ ಏರುತ್ತಲಿದೆ!—ಒಂದು ಮಹಡಿಯಿದ್ದದ್ದು ಎರಡು ಮಹಡಿಯಾಯಿತು, ಮೂರು ಮಹಡಿಯೂ ಆಗಿದೆ; ಮುಂದೆ ನಾಲ್ಕು ಮಹಡಿಯೂ ಆಗುತ್ತೆ" ಎಂದನು. ನಾವೆಲ್ಲ ಇದರ ಅಭಿಪ್ರಾಯವನ್ನು ಒಡನೆಯೇ ಕಂಡುಕೊಂಡು ಆಶ್ಚರ್ಯಚಕಿತ ರಾದೆವು.

ಬಾಸುಂದಿ, ಬಾದಾಮಿ ಹಾಲಿನ ಗೋವಿಂದಸ್ವಾಮಿಯು "ನಾಲ್ಕನೇ ಮಹಡಿ ಯಾಗುತ್ತದೆಯೇ! ಎಂದನು. ಪಾಪ, ಅವನ ಕಷ್ಟ ಅವನಿಗೆ—ಭೀಮಣ್ಣನನ್ನು ಗಾತ್ರದಲ್ಲಿ ಒಂದು ಕೈಮೀರಿಸಿದ್ದ—ಮೂರನೆ ಮಹಡಿಯೇ "ಮೌಂಟ್ ಎವರೆಸ್ಟ್" ಆಗಿತ್ತು ಅವನ ಪಾಲಿಗೆ!

ಭೀಮಣ್ಣನು ಅವನನ್ನು ದೃಷ್ಟಿಸಿ ನೋಡುತ್ತಾ "ಆಗದೇ ಏನು? ನಾಲ್ಕನೆ ಯದೂ ಆಗುತ್ತೆ, ಐದನೆಯದೂ ಆಗುತ್ತೆ. ಬಾಸುಂದಿ ಬಾದಾಮಿ ಹಾಲುಗಳು ಹೀಗೆ ಖರ್ಚಾಗುತ್ತಿದ್ದರೆ ಆಗುವುದೇನಾಶ್ಚರ್ಯ?" ಎಂದನು.

ಆದರೆ, ಯಾರ ಲೆಕ್ಕದಲ್ಲಿಯೋ ಬಾಸುಂದಿಗಳನ್ನು ನುಂಗುತ್ತಿದ್ದ ಗೋವಿಂದ ಸ್ವಾಮಿಗೆ ಇದೇನು ತಟ್ಟಲೇ ಇಲ್ಲ.

ನನ್ನ ತುಪ್ಪದ ದೋಸೆಯನ್ನು ಮೆಲ್ಲುತ್ತಾ ನಾನು "ಹಾಗಾದರೆ, ಈ ಯುದ್ಧ ಕಾಲದಲ್ಲಿ ಕೀಳು ಮೇಲಾಗುವುದು, ಮೇಲು ಕೀಳಾಗುವುದೆಂದು ಹೇಳುತ್ತಾನಲ್ಲಾ, ಅದು ಸುಳ್ಳೆ?'' ಎಂದೆ.

ಭೀಮಣ್ಣನು "ಮೇಲು ಕೀಳಾಗುವ ವಿಚಾರ ನಾನು ಹೇಳಲಾರೆ. ಆದರೆ, ಈಗಿನ ಕಾಲದಲ್ಲಿ ಕೀಳು ಮೇಲಾಗುವ ಸಂಭವಗಳೆಷ್ಟೋ ಇವೆಯೆಂದು ಹೇಳಬಲ್ಲೆ. ಇದಕ್ಕೆ ನಮ್ಮ ಶುಂಠೈಯ್ಯನೇ ದೃಷ್ಟಾಂತ" ಎಂದನು.

"ಶುಂಠೈಯ್ಯನೆ? ಯಾರದು? ಏನವನ ವಿಚಾರ?" ಎಂದು ಎಲ್ಲರೂ ಕೇಳ ತೊಡಗಿದೆವು. ಹೀಗೆ ಕೇಳಿದರೆ ನಮಗೆ ಗೊತ್ತು—ಒಂದು ಸ್ವಾರಸ್ಯವಾದ ಕಥೆ ಹೊರಬೀಳುವುದೆಂದು.

ಭೀಮಣ್ಣನು "ಗಣಪಾ! ಇನ್ನೊಂದು ಲೋಟ ಸ್ಪೆಷಲ್ ಕಾಫಿ!'' ಎಂದು ಕೂಗಿ ಹೇಳಿ ಗಂಟಲು ಸರಿಮಾಡಿಕೊಂಡು ಹೇಳತೊಡಗಿದನು.

"ಶುಂಠೈಯ್ಯ ನನ್ನ ನೆಂಟ—ಕೇವಲ ನನ್ನ ಸೋದರಮಾವನ ಮಗನಿಗೆ ಭಾವಮೈದುನನಾಗಬೇಕು. ಅದನ್ನು ನೀವು ಕೆಲವರು ಅರಿತಿರಬಹುದು. ಇಲ್ಲದವರು, ಈಗ ಕೆಲವು ತಿಂಗಳುಗಳ ಹಿಂದೆ ಪ್ರತಿನಿತ್ಯವೂ ಬಳೇಪೇಟೆಯಲ್ಲಿ ಹತ್ತು ಘಂಟೆ ಹೊತ್ತಿಗೆ, ಒಂದು ಮಾಸಿದ ಹರಕು ಪಂಚೆಯನ್ನುಟ್ಟು, ಗುಂಡಿಯಿಲ್ಲದ ತೂತು ಜೇಬಿನ ಕೊಳಕುಮಯವಾದ ಕರಿಯಂಗಿಯನ್ನು ಮೈಮೇಲೆ ನೇತು ಹಾಕಿಕೊಂಡು, ಒಂದಾನೊಂದು ಕಾಲದಲ್ಲಿ ಬೆಳ್ಳಗಿದ್ದ ಗಾಂಧಿ ಟೋಪಿಯನ್ನು ನುಣ್ಣಗೆ ಕಲಾಯಿ ಮಾಡಿಸಿದ ತಲೆಯ ಮೇಲೆ ಅಮುಕಿಕೊಂಡು, ಬಾಯಿಯಲ್ಲಿ ಜೊಲ್ಲು ಸುರಿಸುತ್ತಾ, ಗೆಡ್ಡೆಕಣ್ಣುಗಳಿಂದ ಆ ಕಡೆ ಈ ಕಡೆ ನೋಡುತ್ತಾ ವಾಲಾಡಿಕೊಂಡು ಹೋಗುತ್ತಿದ್ದ ಒಬ್ಬ ಆಸಾಮಿಯನ್ನು ನೋಡಿದ್ದಿದ್ದರೆ, ಅವನು ನಮ್ಮ ಶುಂಠೈಯ್ಯನಲ್ಲದೆ ಮತ್ತ್ಯಾರೂ ಅಲ್ಲವೆಂದು ತಿಳಿದುಕೊಳ್ಳಬಹುದು. ಅವರಪ್ಪ ಅವನಿಗೆ ಹೆಸರಿಡುವಾಗ ಬಹಳ ಕಷ್ಟಪಟ್ಟ. ಜೋಯಿಸರು ಜಾತಕ ನೋಡಿ ಇವನೊಬ್ಬ ದೊಡ್ಡ ಜ್ಞಾನಿಯಾಗುತ್ತಾನೆ, ಬಹಳ ಮುಂದಕ್ಕೆ ಬರುತ್ತಾನೆಂದು ಹೇಳಿಬಿಟ್ಟರಂತೆ. ಸರಿ, ತಕ್ಕ ಹೆಸರಿಡಬೇಕೆಂದು ವಾಲ್ಮೀಕಿ, ವ್ಯಾಸ, ಪರಾಶರ, ಬಾದರಾಯಣ ಇತ್ಯಾದಿ ಹೆಸರುಗಳನ್ನೆಲ್ಲಾ ಯೋಚನೆ ಮಾಡಿ, ಕಡೆಗೆ ಯಾವುದೂ ಸರಿಬೀಳದೆ ದೇವರ ಹೆಸರಿರಲೆಂದು ಶ್ರೀಕಂಠಯ್ಯ ಎಂದು ಹೆಸರಿಟ್ಟರು. ಆದರೆ, ಈ ಪ್ರಪಂಚದ ಆಶ್ಚರ್ಯ ಏನು ಹೇಳುವುದು? ನಾವು ಹುಟ್ಟುವುದು ಯಾವ ಹೆಸರಿನಿಂದಲೋ, ಬದುಕುವುದು ಮತ್ತ್ಯಾವ ಹೆಸರಿನಿಂದಲೋ! ಶ್ರೀಕಂಠಯ್ಯನು ಬೆಳೆಯುತ್ತಾ, ಬೆಳೆಯುತ್ತಾ, ತನ್ನಲ್ಲಿನ ಪ್ರತಿಭಾಶಕ್ತಿ ಇವುಗಳಿಂದ ಬೇರೆಯೊಂದು ಹೆಸರನ್ನೇ ಸಂಪಾದಿಸಿಬಿಟ್ಟ—ಶುಂಠೈಯ್ಯನೆಂದು! ಮನೆಯವರಿಗೆ ಅವನು ಪ್ರೀತಿಯಿಂದ "ಕಂಠಿ" ಯಾದರೆ, ಅವನ ಸ್ನೇಹಿತರಿಗೆ ಆದರದಿಂದ "ಶುಂಠಿ!"

ಈ ಸಂಪಾದಿಸಿದ ಹೆಸರೋ, ಒಳ್ಳೇ ಅನ್ವರ್ಥವೇ ಆಯಿತು. ಅವರಪ್ಪ ಅವನನ್ನು ಬಹಳ ಆಸಕ್ತಿಯಿಂದ ಓದಿಸಿದನು. ಬಿ.ಎ.ಮಾಡಿಸಿ ಸಿವಿಲ್ ಸರ್ವಿಸ್ಸಿಗೆ ಕಳುಹಿಸಬೇಕೆಂದು ಅವನ ಆಶೆ: ಶುಂಠೈಯ್ಯನಾದರೋ ಹದಿನೆಂಟು ವರ್ಷದ ಹೊತ್ತಿಗೆ ಲೋವರ್ ಸೆಕಂಡರಿ ತರಗತಿಗೆ ಬಂದು, "ನಾಮಂ ಬಲಹೀನೇನಲಭ್ಯಃ" ಎಂಬ ಶ್ರುತಿವಚನವನ್ನು ಮನಗಂಡು ಸಮಸ್ತ ಬಲಸಮೇತನಾಗಿ ಆ ಪರೀಕ್ಷೆಗೆ ನಾಲ್ಕೈದು ವರ್ಷ ಅಗ್ಗಿ ಹತ್ತುವ ಪ್ರಯತ್ನ ಮಾಡಿದನು. ಆದರೆ, ಜಯಾಪಜಯಗಳು ದೈವೇಚ್ಛೆಯಷ್ಟೆ! ಅಪಜಯವೇ ಆಯಿತು. ಅವನ ತಂದೆಯು ಹೇಗಾದರೂ ಮಾಡಿ ಅವನನ್ನು ಆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿಯೇ ಬಿಡಬೇಕೆಂದು ಶುಂಠೈಯ್ಯನನ್ನು ಸ್ಕೂಲಿನಿಂದ ಸ್ಕೂಲಿಗೆ ಬದಲಾಯಿಸಿದ್ದೂ ಬದಲಾಯಿಸಿದ್ದೆ—ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಇಪ್ಪತ್ತು ನಾಲ್ಕನೆಯ ವಯಸ್ಸಿನಲ್ಲಿ ಇನ್ನು ಓದು ಸಾಕೆಂದು ಶುಂಠೈಯ್ಯನು ತನ್ನ ವಿದ್ಯಾಭ್ಯಾಸವನ್ನು ನಿಲ್ಲಿಸಿಬಿಟ್ಟನು. ಅವನ ಉಪಾಧ್ಯಾಯರುಗಳೆಲ್ಲಾ ಗೆದ್ದೆವೆಂದು ಉಸಿರಾಡತೊಡಗಿದರು.

ಶುಂಠೈಯ್ಯನಿಗೆ ವ್ಯಾಪಾರ ಮಾಡಬೇಕೆಂದು ಆಶೆ. ಅವನ ತಂದೆಯೋ ಅವನ ಕುಶಾಗ್ರ ಬುದ್ಧಿ ವ್ಯಾಪಾರಕ್ಕೆ ಉಪಯೋಗವಿಲ್ಲವೆಂದು, ಬಹಳ ಕಷ್ಟಪಟ್ಟು ಒಂದು 'ಬಸ್ ಕಂಡಕ್ಟರ್' ಕೆಲಸಮಾಡಿಸಿಕೊಟ್ಟನು. ಶುಂಠೈಯ್ಯನಿಗೆ ಟಿಕೆಟ್ ಪುಸ್ತಕಗಳಿಂದ ರಂಧ್ರ ಕೊರೆದಿರುವ ಪಂಕ್ತಿಗೆ ಸರಿಯಾಗಿ ಟಿಕೆಟ್ಟುಗಳನ್ನು ಹರಿದು ಕೊಡಲು ಬಹಳ ಖುಷಿ. ಬಸ್ಸಿನ ಬಳಿ ಬಂದವರಿಗೆಲ್ಲಾ ಟಿಕೆಟ್ಟುಗಳನ್ನು ಫರ್ರನೆ ಹರಿದು ಕೊಡುವುದು, ಎಲ್ಲರ ಟಿಕೆಟ್ಟುಗಳನ್ನು ಮತ್ತೆ ಮತ್ತೆ ಪರೀಕ್ಷೆ ಮಾಡುವ ನೆಪದಲ್ಲಿ ಐದಾರು ಸಲ ಅದಕ್ಕಾಗಿ ಕೊಟ್ಟಿದ್ದ ಕತ್ತರಿಯಿಂದ ಅವುಗಳಲ್ಲಿ ಚಿತ್ತಾರ ವಾಗಿ ತೂತು ಮಾಡುವುದು—ಈ ಆಟದಲ್ಲಿ ಪ್ರಯಾಣಿಕರಿಂದ ದುಡ್ಡು ವಸೂಲು ಮಾಡುವುದನ್ನೇ ಮರೆತುಬಿಡುತ್ತಿದ್ದನು. ಇವನು ಮರೆತರೆ ಬಸ್ ಮಾಲೀಕನು ಮರೆಯಬೇಕಲ್ಲಾ! ಖರ್ಚಾದ ಟಿಕೆಟ್ಟೆಲ್ಲಾ ಲೆಕ್ಕ ಹಾಕಿ ತಿಂಗಳ ಸಂಬಳದಲ್ಲಿ ಹಿಡಿಯುತ್ತಿದ್ದನು. ಸಂಬಳ ಹದಿನೈದು ರೂಪಾಯಿ. ಮಾರಾಟವಾಗಿದ್ದ ಟಿಕೆಟ್ಟು ಗಳ ಪೈಕಿ ಬರಬೇಕಾದದ್ದು ಮೂವತ್ತು ರೂಪಾಯಿ. ಹೀಗಾಗಿ ಪ್ರತಿ ತಿಂಗಳೂ ಶುಂಠೈಯ್ಯನ ತಂದೆಗೆ ಹದಿನೈದು ರೂಪಾಯಿ ಕ್ಷೌರ! ಶುಂಠೈಯ್ಯನು ಕೆಲಸಕ್ಕೆ ಸೇರಿದ ನಾಲ್ಕನೆಯ ತಿಂಗಳು ಟಿಕೆಟ್ಟುಗಳ ದರ ಹೆಚ್ಚಿಸಿದಾಗ ಈ ದಂಡ ತೆರಿಗೆಯು ಇಪ್ಪತ್ತೈದು ರೂಪಾಯಿಗೇರಿತು. ಶುಂಠೈಯ್ಯನ 'ಕಂಡಕ್ಟರ್' ಕೆಲಸವೂ ಅವತ್ತಿಗೆ ಕೊನೆಗಂಡಿತು!

ಈ ರೀತಿ ಇನ್ನೂ ಕೆಲವು ಉದ್ಯಮಗಳಾದ ಮೇಲೆ, ವ್ಯಾಪಾರಕ್ಕೇ ಹಾಕಿ ನೋಡೋಣವೆಂದು ಅವನ ತಂದೆ ನಿಶ್ಚಯಿಸಿದನು. ಶುಂಠೈಯ್ಯನಿಗೆ ಊದುಬತ್ತಿ ಗಳನ್ನು ಮಾಡಿ ವ್ಯಾಪಾರ ಮಾಡಬೇಕೆಂದು ಆಶೆ. ಆಗಲೆಂದು ಅವನ ತಂದೆಯು ಬೇಕಾದ ಸಲಕರಣೆಗಳನ್ನೆಲ್ಲಾ ಒದಗಿಸಿಕೊಟ್ಟನು. ಗಾಡಿಗಟ್ಟಲೆ ಕಡ್ಡಿಗಳನ್ನು ತರಿಸಿ ಹಾಕಿಸಿದನು. ಹಚ್ಚುವುದಕ್ಕೆ ಬೇಕಾದ ಸುಗಂಧದ ಪುಡಿಯನ್ನು ಶೇಖರಿ ಸಿದ್ದಾಯಿತು. ಕಡ್ಡಿಗಳನ್ನು ನುಣ್ಣಗೆ ಜೀವಿ ಅವುಗಳಿಗೆ ವಿಧವಿಧ ಬಣ್ಣಗಳನ್ನು ಕಟ್ಟುವುದರಲ್ಲಿ ಶುಂಠೈಯ್ಯನಿಗೆ ಬಹಳ ಆನಂದ. ಬೆಳಿಗ್ಗೆಯಿಂದ ರಾತ್ರಿಯವರೆಗೂ ಇದೇ ಕೆಲಸ. ಆದರೆ, ಊದುಬತ್ತಿ ತಯಾರಿಕೆಯೇನೂ ಮುಂದುವರಿಯಲಿಲ್ಲ. ಒಂದು ದಿನ ಬಚ್ಚಲು ಮನೆಯಲ್ಲಿ ಒಲೆ ಕಾಸುತ್ತಾ ಕೂತಿದ್ದ ಶುಂಠೈಯ್ಯನಿಗೆ ಮಿಂಚಿನಂತೆ ಒಂದು ಸ್ಫೂರ್ತಿ ಹೊಳೆಯಿತು. ಸುಗಂಧದ ಪುಡಿಯನ್ನು ಸ್ವಲ್ಪ ತಂದು ಬೆಂಕಿಯ ಮೇಲೆ ಎರಚಿದನು. ಅದು "ಭುಸ್" ಎಂದು ಹತ್ತಿಕೊಂಡು ಸುವಾಸನೆಯಾದ ಹೊಗೆ ಬಂದಿತು. ಅದನ್ನು ನೋಡಿ ಮತ್ತಷ್ಟು ಎರಚಿದನು. ಮತ್ತಷ್ಟು ಹೊಗೆಯಾಯಿತು. ಶುಂಠೈಯ್ಯನಿಗೆ ಬಹಳ ಸಂತೋಷವಾಯಿತು. ಪುಡಿಯನ್ನು ಹಿಡಿಹಿಡಿಗಳಲ್ಲೇ ಬೆಂಕಿಯಲ್ಲಿ ಹಾಕುವುದಕ್ಕಾರಂಭಿಸಿದನು. ಮೂರು ದಿವಸಗಳಲ್ಲಿ ತರಿಸಿದ್ದ ಪುಡಿಯಲ್ಲಿ ಅರ್ಧವೆಲ್ಲ ಖರ್ಚಾಯಿತು. ನಾಲ್ಕನೆಯ ದಿನ ಸ್ವಲ್ಪ ಸ್ವಲ್ಪ ಹಾಕಿ ಪ್ರಯೋಜನವಿಲ್ಲವೆಂದು ಉಳಿದ ಪುಡಿಯಷ್ಟನ್ನೂ ಬೆಂಕಿಗೆ ಸೇರಿಸಿಬಿಟ್ಟನು. ಮನೆಯೆಲ್ಲಾ ಸುಗಂಧದ ಹೊಗೆ ತುಂಬಿಕೊಂಡು ಎಲ್ಲರಿಗೂ

ಉಸಿರುಬಿಡುವುದೇ ಕಷ್ಟವಾಯಿತು. ಶುಂಠೈಯ್ಯನಿಗೂ ಅವನ ತಂದೆಗೂ ಕೆಮ್ಮಲು ಶುರುವಾಗಿ ಶ್ಲೇಷ್ಮದಲ್ಲಿ ರಕ್ತಬೀಳುವುದಕ್ಕೆ ಹತ್ತಿತು. ಸರಿ, ಆವತ್ತಿನಿಂದ ಶುಂಠೈಯ್ಯನ ಊದುಬತ್ತಿ ತಯಾರಿಕೆಯು ನಿಂತುಹೋಯಿತು. ಕಡ್ಡಿಗಳು ಮಾತ್ರ ಉಳಿದವು. ಶುಂಠೈಯ್ಯನಾದರೋ ಅವುಗಳನ್ನು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಜೇಬಿನಲ್ಲಿ ಹಾಕಿಕೊಂಡು ಹಲ್ಲು ಚುಚ್ಚುವುದಕ್ಕುಪಯೋಗಿಸತೊಡಗಿದನು. ಬೆಳಿಗ್ಗೆ ಒಂಭತ್ತು ಘಂಟೆಗೆ ಉಪಹಾರಾದಿಗಳನ್ನು ಮುಗಿಸಿಕೊಂಡು ಹೊರಟರೆ ದೊಡ್ಡಪೇಟೆ, ಚಿಕ್ಕಪೇಟೆ, ಬಳೇಪೇಟೆಗಳಲ್ಲಿ ಹಲ್ಲು ಚುಚ್ಚಿಕೊಳ್ಳುತ್ತಾ ಜೊಲ್ಲು ಸುರಿಸಿಕೊಂಡು ಪ್ರತಿಯೊಂದು ಅಂಗಡಿ ಮುಂದೆಯೂ ಎರಡೆರಡು ನಿಮಿಷಗಳ ಪ್ರಕಾರ ನಿಂತು ನೋಡುತ್ತಾ ಹನ್ನೆರಡು ಘಂಟೆ ವೇಳೆಗೆ ಊಟಕ್ಕೆ ಮನೆಯಲ್ಲಿ ಹಾಜರು. ಸಾಯಂಕಾಲ ನಾಲ್ಕು ಘಂಟೆಗೆ ಚಹಾ ಕುಡಿದು ಮಾರ್ಕೆಟ್ ಕಡೆ ಸವಾರಿ! ಇದೇ ದಿನಚರಿಯಾಗಿತ್ತು.

ಹೀಗಿರುವಲ್ಲಿ ಒಂದು ದಿನ ರೈಲ್ವೆಸ್ಟೇಷನ್ ರಸ್ತೆಯಲ್ಲಿ ಮನೆಕಡೆ ಹೋಗುತ್ತಿರುವಾಗ ಒಂದು ಮೋಟಾರು ಬಂದು ಹಠಾತ್ತಾಗಿ ಇವನ ಬಳಿ ನಿಂತಿತು. ಅದರಲ್ಲೊಬ್ಬ ಫರಂಗಿ ಸಾಹೇಬ—ಸೈನ್ಯದ ಅಧಿಕಾರಿ. ಅವನು ನಮ್ಮ ಶುಂಠೈಯ್ಯನನ್ನು ಹತ್ತಿರ ಕರೆದು "ಇಲ್ಲಿ ಸಮೀಪದಲ್ಲಿ ಎಲ್ಲಿಯಾದರೂ ದಂತವೈದ್ಯರಿರುವರೆ?" ಎಂದನು.

ಶುಂಠೈಯ್ಯನು ಲೋವರ್ ಸೆಕಂಡರಿ ದಂಡಯಾತ್ರೆಗಳಲ್ಲಿ ಕಲಿತ ತನ್ನ ಇಂಗ್ಲೀಷಿನ ವೈಖರಿಯನ್ನು ತೋರ್ಪಡಿಸುತ್ತಾ "ಇಲ್ಲ, ಯಾತಕ್ಕೆ?" ಎಂದು ಕೇಳಿದನು.

ಸಾಹೇಬನು "ಈ ದಿವಸ ಊಟಮಾಡುವಾಗ ಒಂದು ಚೂರು ಮೂಳೆಯೋ ಏನೋ ಹಲ್ಲು ಸಂದಿನಲ್ಲಿ ಸಿಕ್ಕಿಕೊಂಡು ಬಿಟ್ಟಿದೆ. ಏನುಮಾಡಿದರೂ ಈಚೆಗೆ ಬಂದಿಲ್ಲ. ಪ್ರಾಣಯಾತನೆಯಾಗಿದೆ" ಎಂದನು.

ಶುಂಠೈಯ್ಯನು "ಇದಕ್ಕೆಲ್ಲಾ ಹಲ್ಲು ವೈದ್ಯನಾಗಬೇಕೆ? ಒಂದು ಕಡ್ಡಿಯನ್ನು ತೆಗೆದುಕೊಂಡು ಚುಚ್ಚಿದರಾಯಿತು" ಎಂದನು.

ಸಾಹೇಬನು "ನಾವು ಉಪಯೋಗಿಸುತ್ತಿದ್ದ ಹಲ್ಲು ಚುಚ್ಚುವ ಕಡ್ಡಿಗಳು ವಿದೇಶಗಳಿಂದ ಬರುತ್ತಿದ್ದವು. ಬರ್ಮಾ ಮಲಯಗಳನ್ನು ನಾವು ಮತ್ತೆ ಜಯಿಸುವವರೆಗೂ ಆ ರೀತಿಯ ಕಡ್ಡಿಗಳು ಮತ್ತೆ ಸಿಕ್ಕುವುದಿಲ್ಲ" ಎಂದನು.

ಶುಂಠೈಯ್ಯನು ನಕ್ಕು "ಛೆ, ಛೆ, ಏನು ಹಾಗೆಂದರೆ? ನಾನು ಪ್ರತಿನಿತ್ಯವೂ ಉಪಯೋಗಿಸುತ್ತಿರುವ ಈ ಕಡ್ಡಿಯನ್ನು ನೋಡಿ, ಸಿಂಗಪುರದ ಕಡ್ಡಿಯ ಅಪ್ಪನಿದ್ದ ಹಾಗಿದೆ" ಎಂದು ತನ್ನ ಜೇಬಿನಲ್ಲಿ ತುಂಬಿಕೊಂಡಿದ್ದ ಕಡ್ಡಿಗಳಲ್ಲಿ ಎರಡನ್ನು ತೆಗೆದು

ಸಾಹೇಬನಿಗೆ ಕೊಟ್ಟನು. ಸಾಹೇಬನು ಅವನ್ನು ತೆಗೆದುಕೊಂಡು ಹಲ್ಲು ಚುಚ್ಚ ಲಾರಂಭಿಸಿದನು. ಒಂದೆರಡು ನಿಮಿಷಗಳಲ್ಲಿ ಅವನ ಮುಖವು ಆಹ್ಲಾದಮಯ ವಾಗಿ ಪ್ರಸನ್ನಮಯವಾಯಿತು. ಸಿಕ್ಕಿಕೊಂಡಿದ್ದ ಚೂರು ಹೊರಗೆ ಬಂದು ಬಿಟ್ಟಿತು! ಅವನು ಸಂತೋಷವನ್ನು ತಡೆಯಲಾರದೆ ಮೋಟಾರಿನಿಂದ ಕೆಳಗಿಳಿದು ಶುಂಠೈಯ್ಯನ ಕೈಗಳೆರಡನ್ನೂ ಹಿಡಿದು ಕಣ್ಣಿನಲ್ಲಿ ನೀರು ತುಂಬುವವರೆಗೂ ಕುಲಕಿ ಬಿಟ್ಟನು.

"ಈ ರೀತಿಯ ಕಡ್ಡಿಗಳನ್ನು ನಾನು ಕನಸಿನಲ್ಲಿಯೂ ಕಂಡಿರಲಿಲ್ಲ. ಅತ್ಯಂತ ಆಶ್ಚರ್ಯಕರವಾಗಿದೆ! ಇವು ಎಲ್ಲಿ ಸಿಕ್ಕುತ್ತೆ ಮತ್ತು ಕ್ರಯವೇನು?" ಎಂದು ಆತುರ ದಿಂದ ಕೇಳಿದನು.

ಶುಂಠೈಯ್ಯನ ವ್ಯಾಪಾರ ತೀಕ್ಷ್ಣತೆಯು ಒಡನೆಯೇ ಹೊರಬಿತ್ತು. "ಈ ಕಡ್ಡಿಯೆ? ನನ್ನ ಹೊರತು ಮತ್ಯಾರಲ್ಲೂ ಸಿಕ್ಕುವುದಿಲ್ಲ. ಈ ಕಡ್ಡಿಗಳ ರಹಸ್ಯ ನನಗೆ ಮಾತ್ರ ಗೊತ್ತು!" ಎಂದನು.

ಸಾಹೇಬನು "ಹಾಗಾದರೆ ಇವುಗಳನ್ನು ನಮಗೆ ಸರಬರಾಜು ಮಾಡ ಬಲ್ಲೆಯಾ? ಮಾಡುವುದಾದರೆ ಅನುಕೂಲವಾದ ದರ ಏರ್ಪಡಿಸಿ ಕೊಡುತ್ತೇವೆ" ಎಂದನು.

ಶುಂಠೈಯ್ಯ "ಅಗತ್ಯವಾಗಿ. ಸಾದಾ ಕಡ್ಡಿಗಳು ಕಟ್ಟು ಒಂದಕ್ಕೆ ಎರಡು ರೂಪಾಯಿ. ಸ್ಪೆಷಲ್ ರಖಂ ಬಣ್ಣ ಹಾಕಿದ್ದು (ಖಾತರಿ ಬಣ್ಣ) ಕಟ್ಟು ಒಂದಕ್ಕೆ ಮೂರು ರೂಪಾಯಿ"

ಸಾಹೇಬ, "ಈ ನಿನ್ನ ದರಗಳು ಅತ್ಯಂತ ಮಿತವಾಗಿವೆ. ಧನ ಪಿಶಾಚಿ ಹಿಡಿದಿರುವ ಈ ದಿನಗಳಲ್ಲಿ ನಿನ್ನ ಧಾರಾಳತ್ವವು ನನಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇದಕ್ಕೆ ನಿನಗೆ ತಕ್ಕ ಪ್ರತಿಫಲ ದೊರೆಯುವಂತೆ ನಾನು ನೋಡಿ ಕೊಳ್ಳುತ್ತೇನೆ. ಈಗ ಸದ್ಯಕ್ಕೆ ನನಗೆ ಒಂದು ಲಕ್ಷ ಕಡ್ಡಿಗಳನ್ನು ನಾಳೆಯ ಒಳಗಾಗಿ ಒಪ್ಪಿಸಿಬಿಡಬೇಕು. ಕಟ್ಟು ಒಂದರಲ್ಲಿ ನೂರು ಕಡ್ಡಿಗಳಿರಬೇಕು. ಒಂದೊಂದು ಕಡ್ಡಿ ಎರಡೂವರೆ ಅಂಗುಲಗಳಿಗೆ ಕಡಿಮೆ ಇರಕೂಡದು. ನಮಸ್ಕಾರ" ಎಂದು ಹೇಳಿ ಮತ್ತೆ ಶುಂಠೈಯ್ಯನ ಕೈಗಳನ್ನು ಕುಲುಕಿ ಅವನ ಕೈಯ್ಯಲ್ಲಿ ತನ್ನ ವಿಳಾಸದ ಚೀಟಿಯೊಂದನ್ನು ಇಟ್ಟು ಮೋಟಾರಿನಲ್ಲಿ ಕುಳಿತು ಹೊರಟೇ ಹೋದನು. ಶುಂಠೈಯ್ಯನಿಗಾದರೋ ಅವನ ಆಶ್ಚರ್ಯದಲ್ಲಿ ತಾನು ಕೇಳಿದ ಕಟ್ಟು ಎಂದರೆ ಸಾವಿರ ಕಡ್ಡಿಗಳು. ಒಂದೊಂದು ಹದಿನಾರು ಅಂಗುಲ ಉದ್ದ ಎಂಬುದನ್ನು ಸಾಹೇಬನಿಗೆ ತಿಳಿಯಪಡಿಸಲು ಅವಕಾಶವೇ ಸಿಕ್ಕಲಿಲ್ಲ. ಮನಸ್ಸಿನಲ್ಲಿಯೇ ಹಿಟ್ಲರ್ ಹಿರೋ ಹಿಟೋ, ಮುಸ್ಸೊಲಿನಿಗಳಿಗೆ ಧನ್ಯವಾದಗಳನ್ನರ್ಪಿಸುತ್ತಾ ಮನೆಗೆ ಓಡಿ ದನು. ಅಪ್ಪನಿಗೆ ಎಲ್ಲವನ್ನೂ ಹೇಳಿದ್ದಾಯಿತು. ಮಾರನೆಯ ದಿವಸದೊಳಗೆ

ಲಕ್ಷ ಕಡ್ಡಿಗಳನ್ನು ಒದಗಿಸಿದ್ದಾಯಿತು. ಪ್ರವೀಣರೆಲ್ಲರೂ ಈ ಕಡ್ಡಿಗಳು ಅತ್ಯಂತ ಸಮರ್ಪಕವಾದುವೆಂದು ಅಭಿಪ್ರಾಯವನ್ನಿತ್ತರು. ಸಾಹೇಬನು ಶುಂಠೈಯ್ಯನಿಗೆ ಇಂಡಿಯಾ ದೇಶಕ್ಕೆಲ್ಲಾ ಈ ಕಡ್ಡಿಗಳನ್ನು ತಮಗಾಗಿ ಸರಬರಾಜು ಮಾಡುವುದಕ್ಕೆ ಒಂದು ದೊಡ್ಡ 'ಕಂಟ್ರಾಕ್ಟ'ನ್ನೇ ಕೊಡಿಸಿಬಿಟ್ಟನು. ಈ ರೀತಿಯ ಒಂದು ರಹಸ್ಯ ಆಜ್ಞೆಯನ್ನು ಕೂಡ ಹೊರಡಿಸಿದನೆಂದು ಹೇಳುತ್ತಾರೆ. "ಎಲ್ಲರೂ ಊಟವಾದ ಮೇಲೆ ಹಲ್ಲು ಸಂದಿಯಲ್ಲಿ ಏನಾದರೂ ಸಿಕ್ಕಿಕೊಂಡೇ ಸಿಕ್ಕಿಕೊಳ್ಳುತ್ತೆ. ಈ ಹಲ್ಲು ನೋವು ಇರಬೇಕಾದರೆ ಶತ್ರುವಿನ ಮೇಲೆ ಪರಿಣಾಮಕಾರಿಯಾದ ಯುದ್ಧವನ್ನು ಮಾಡುವುದು ಕಷ್ಟ. ಸೈನ್ಯವು ಹೊಟ್ಟೆಯ ಮೇಲೆ ನಡೆಯುವುದೆಂಬ ಗಾದೆಯಿದೆ ಯಷ್ಟೆ. ಇದಕ್ಕಿಂತ ಸೈನ್ಯವು ಹಲ್ಲಿನ ಮೇಲೆ ನಡೆಯುವುದೆಂದು ಹೇಳುವುದು ಸೂಕ್ತವೆಂದು ತೋರುತ್ತೆ. ಆದುದರಿಂದ ಜಾಗರೂಕತೆಗಾಗಿ ಪ್ರತಿಯೊಬ್ಬರೂ ಇನ್ನು ಮೇಲೆ ತಮ್ಮ ಇತರ ವಸ್ತುಗಳೊಂದಿಗೆ ಒಂದು ಕಟ್ಟು ಕಂಠೈಯ್ಯನ ಕಡ್ಡಿ ಗಳನ್ನೂ ಇಟ್ಟಿರಬೇಕು" ಎಂದು. ಆದರೆ ಇದು ನಿಜವೋ ಸುಳ್ಳೋ ನಾನು ಹೇಳಲಾರೆ. ಅಂತು ಪ್ರತಿಯೊಬ್ಬ ಸೈನಿಕನಿಗೂ ಅವನ ಭತ್ಯದೊಂದಿಗೆ ತಿಂಗಳಿಗೆ ಎರಡು ಕಟ್ಟು 'ಕಂಠೈಯ್ಯನ ಕಡ್ಡಿ'ಗಳನ್ನು ಕೊಡಹತ್ತಿದರಂತೆ. ಮತ್ತು ಪ್ರತಿ ಯೊಬ್ಬ ಅಧಿಕಾರಿಗೂ ತಿಂಗಳಿಗೆ ನಾಲ್ಕು ಕಟ್ಟುಗಳು ಕೊಡಲ್ಪಟ್ಟವಂತೆ. ಅನೇಕರು ಬಣ್ಣಹಾಕಿದ ಸ್ಪೆಷಲ್ ಕಡ್ಡಿಗಳನ್ನೇ ಕೊಳ್ಳಲಾರಂಭಿಸಿದರು. ಕೂಟ, ಔತಣ ಗಳಲ್ಲಿ ಯಾವುದಿರಲಿ, ಯಾವುದಿಲ್ಲದಿರಲಿ ಊಟದ ಕೊನೆಯಲ್ಲಿ ವಿಧವಿಧವಾದ ಖಾತರಿ ಬಣ್ಣಗಳ "ಕಂಠೈಯ್ಯನ ಸ್ಪೆಷಲ್ ಕಡ್ಡಿ"ಗಳನ್ನು ಹಲ್ಲು ಚುಚ್ಚಿಕೊಳ್ಳುವು ದಕ್ಕಾಗಿ ಹಂಚಲ್ಪಡುವ ವಾಡಿಕೆಯಾಗಿಹೋಯಿತು.

ಇನ್ನು ಶುಂಠೈಯ್ಯನನ್ನು ಕೇಳಬೇಕೆ? ಮನೆಯಲ್ಲಿ ರಾಶಿರಾಶಿಯಾಗಿ ಕಸ ವಾಗಿ ಬಿದ್ದಿದ್ದ ಕಡ್ಡಿಗಳೆಲ್ಲವೂ ಚಿನ್ನವಾದುವು. ಮೂರು ತಿಂಗಳಲ್ಲಿ ಎರಡು ಲಕ್ಷ ರೂಪಾಯಿ ಸಂಪಾದನೆ. ಬರೀ ಮೋಟಾರುಗಳಲ್ಲಿಯೇ ಓಡಾಟ. ಪುರಸತ್ತಂತೂ ಇಲ್ಲವೇ ಇಲ್ಲ. ಮೊನ್ನೆ ಅವನ ತಂದೆಯನ್ನು ಕಂಡಿದ್ದೆ. "ಶುಂಠಿ ಹೇಗಿದ್ದಾನೆ" ಎಂದು ಕೇಳಿದೆ.

"ರಾಜ ಇದ್ದ ಹಾಗೆ ಇದ್ದಾನಯ್ಯ, ರಾಜ ಇದ್ದ ಹಾಗೆ ಇದ್ದಾನೆ. ವಿರಾಮ ವೇ ಇಲ್ಲ, ಅವನಿಗೆ. ಶೂರತ್ವ ಎಂದರೆ ಅವನದೀಗ ಶೂರತ್ವ. ಒಳ್ಳೆ ಬೂದಿ ಮುಚ್ಚಿದ ಕೆಂಡದ ಹಾಗೆ ಇದ್ದ. ಎಲ್ಲರೂ ಏನೋ ಎಂದಂದುಕೊಂಡಿದ್ದರೆ, ನೋಡಿದಿಯಾ, ಎಂತಹ ಕೇಪು ಹೊಡೆದುಬಿಟ್ಟ! ನನಗೆ ಮೊದಲಿನಿಂದಲೂ ಗೊತ್ತಯ್ಯಾ ಇದು, ಅವನ ಜಾತಕದ ಪ್ರಕಾರ ಹೀಗಾಗುತ್ತಾನೆಂದು!........ನಾನು ಹೋಗಬೇಕು ಭೀಮಣ್ಣ, ಪುರಸತ್ತಿಲ್ಲ......ಗಾಂಧಿನಗರದಲ್ಲಿ ನಲವತ್ತು ಸಾವಿರಕ್ಕೆ ಮನೆ ಮಾತಾಡಬೇಕಾಗಿದೆ. ಯಾವಾಗಾದರೂ ನಮ್ಮ ಗುಡಿಸಿಲು ಕಡೆ ಬಾ, ಕಂಠಿಯನ್ನು ಕಾಣಬಹುದು" ಎಂದು ಹೇಳಿ ಹೊರಟುಹೋದನು.......

ಶುಂಠೈಯ್ಯನನ್ನು ನಾನು ಇನ್ನೂ ಕಾಣುವುದಕ್ಕಾಗಿಲ್ಲ. 'ಕಂಠೈಯ್ಯನ ಕಡ್ಡಿ'ಗಳ ಸರಬರಾಜಿನ ಭರದಲ್ಲಿ (ಸಾದಾ ಕಡ್ಡಿಗಳು ಕಟ್ಟು ೧ಕ್ಕೆ ೨ ರೂ., ಖಾತರಿ ಬಣ್ಣಗಳ ಸ್ಪೆಷಲ್ ಕಡ್ಡಿಗಳು ಕಟ್ಟು ೧ಕ್ಕೆ ೩ ರೂ.) ಅವನು ಬರೀ ವಿಮಾನಗಳಲ್ಲಿಯೇ ತಿರುಗುತ್ತಿದಾನೆ. ಇಷ್ಟರಲ್ಲಿಯೇ ಒಂದು ಬಿರುದು ಸಹಾ ಬರಬಹುದೆಂಬ ರಹಸ್ಯ ವರ್ತಮಾನ!

ಅಂತೂ ಯಾಕೆ ಹೇಳಿದೆ ಅಂದರೆ, ಈಗಿನ ಕಾಲದಲ್ಲಿ ಕೀಳು ಮೇಲಾಗುವುದು ಎಷ್ಟರಲ್ಲಿದೆ? ಇದಕ್ಕೆ ನಮ್ಮ ಶುಂಠೈಯ್ಯನೇ ಸಾಕ್ಷಿ.

—ಬೀರಣ್ಣ.

—o—

## ಪೀ ಸೀ ಎಂ

ಮೈಸೂರಿನಲ್ಲಿ ಮೂರು ಹುಡುಗರಿದ್ದರು,
ಎಸ್ಸೆಸ್ಸೆಲ್‌ಸೀಯನೆಲ್ಲ ಪೂರ ಗೆದ್ದರು.
ಸೀ ಬೀ ಜಿ ಬೇಡೆಂದು,
ಸೆಡ್ಬೀ ಜಿ ಬ್ಯಾಡೆಂದು,
ಸೀ ಬೀ ಸೆಡ್ ಯಾಕೆಂದು,
ಪೀ ಸೀ ಎಂ ಬೇಕೆಂದು,
ಸುತ್ತಿ ಸುತ್ತಿ ಸುತ್ತಿ ಸುತ್ತಿ ಅತ್ತು ಕರೆದರು
ಹತ್ತು ಪುಟ, ಪತ್ರಿಕೆಗೆ, ನಿತ್ಯ ಬರೆದರು.

—ಆಶುಕವಿ.

—o—

# ಹಿಂದುಸ್ಥಾನದಲ್ಲಿ
# ಯಾಕೆ ಇವೆ—ಯಾಕೆ ಇಲ್ಲ

### ಪ್ರತಿಯೊಂದು ಪ್ರಾಣಿಯ ಮುಂದೆಯೂ " ಯಾಕೆ ಇಲ್ಲ " ಎಂದು ಓದುವುದು

ಜಿರಾಫೆ—ನಮ್ಮ ದೇಶದಲ್ಲಿ ಸುದ್ದಿಗಳೂ, ರಹಸ್ಯಗಳೂ, ಅಷ್ಟು ಬಹಿರಂಗವಾಗಿ ಪ್ರಚಾರವಾಗುತ್ತಿರುವಲ್ಲಿ, ಉದ್ದ ಕತ್ತು ಮಾಡಿಕೊಳ್ಳುವ ಅವಶ್ಯಕತೆಯೇನು ?

ಚಿಂಪಾಂಜಿ—ನಮ್ಮ ಆಯುಷ್ಯವೆಲ್ಲ ಅನುಕರಣೆಯಲ್ಲಿ ಕಳೆದಿದೆ, ಅಂತವರಿಗೆ ಚಿಂಪಾಂಜಿ ಏನು ಹೇಳಿಕೊಟ್ಟೀತು ?

ತಿಮಿಂಗಿಲ—ನೀರಲ್ಲಿದ್ದು ಅದು ಮಾಡುವಷ್ಟೆ ಕೆಲಸವನ್ನು ನೆಲದಲ್ಲಿರುವ ನಮ್ಮ ಸಾಹುಕಾರರು ಮಾಡುವಾಗ ?

ಉಷ್ಟ್ರಪಕ್ಷಿ—ಬರಿಯ ಬಿರುಗಾಳಿಗೆ ತಲೆಯನ್ನು ರೆಕ್ಕೆಯ ಎಡೆಯಲ್ಲಿ ಮರೆಯಿಸಿಕೊಳ್ಳುವುದು ಅದು. ನಮ್ಮ ದೇಶದ ಪಂಡಿತರು ಎಂತಹ ಕ್ರಾಂತಿಗೂ ಆಧುನಿಕ ವಿಚಾರಕ್ಕೂ ಅಂಧ ಶ್ರದ್ಧೆಯ ಎಡೆಯಲ್ಲಿ ತಲೆ ಮರೆಯಿಸಿಕೊಳ್ಳಬಲ್ಲವರಾಗಿರುವಾಗ.......?

ಚಮರಿ—ಬ್ಲೇಡಿಗೆ ಬರಗಾಲ ಬಂದ ಈ ಯುಗದಲ್ಲಿ ಜನರೊಡನೆ ತನ್ನ ಗುರುತು ಸಿಗಲಾರದೆಂದು.

ಹಿಪ್ಪೋಪೊಟಾಮಸ್—ಕಂಬುಕಂಠನೇ ಆದರ್ಶವಾಗಿರುವವರಿಗೆ ತುಂಬುಕಂಠನಾದ ಆದರ ಮೇಲೆ ಗೌರವಬಾರದೆಂದು.

### (ಪ್ರತಿಯೊಂದರ ಮುಂದೆಯೂ "ಯಾಕೆ ಇದೆ" ಎಂದು ಓದುವುದು)

ಕತ್ತೆಕಿರುಬ—ಉಚ್ಛಿಷ್ಟ ತಿಂದು ಬದುಕುವ ಜನರು ತನ್ನಿಂದಲೇ ಅದನ್ನು ಕಲಿತಿರಬೇಕೆಂಬ ಹಿರಿತನದ ಹಿಗ್ಗಿನಿಂದ.

ಹುಲಿಮೀನು—ಬಡವನಿಗೆ ಕಾಡು, ನಾಡು, ನೀರು ಒಂದೇ ತೆರನಾಗಲೆಂದು. ಕಾಡಿಗೆ ಹೋದರೆ ಪಟ್ಟೆ ಹುಲಿ, ನಾಡಿಗೆ ಬಂದರೆ ಬಟ್ಟೆ ಹುಲಿ, ನೀರಿಗೆ ಇಳಿದರೆ ಮೀನೇ ಹುಲಿ.

ಖಡ್ಗಮೃಗ—ಅಣಕ, ವಿಮರ್ಶೆಗಳ ಪಾಲಿಗೆ ತನಗೆ ಸಮಜ್ಞಾತಿಗಳು ತುಂಬಾ ಇರುವರೆಂದು.

ಹೆಗ್ಗಣ—ಬೂದಿ ಬಣ್ಣ ಸವರಿ, ಪರಾನ್ನ ಭುಂಜಿಸುವ ಸಾಧುಗಳಿಗೆ ಈ ದೇಶದಲ್ಲಿ ಹೆಚ್ಚಿನ ಮನ್ನಣೆಯೆಂದು.

ದಾಸರ ಹಾವು—ಉದ್ಯೋಗವಿಲ್ಲವಾದರೂ, ಹಣೆ ತುಂಬ ತಿಲಕವಿಡುವ ದಾಸರಿಗೆ ಮನ್ನಣೆಯುಂಟೆಂದು.

ಕತ್ತೆ—ಸಿನಿಮಾ ಸಂಗೀತ ಕೇಳಲು ಜನಗಳ ಕಿವಿ ಸಾಲದೆಂದು.

ಬಾವಲಿ—ಹಳೆಯ ಗುಡಿಗಳನ್ನು ಗುಡಿಸುವವರಿಲ್ಲದೆ ಹೋದರೂ ಹೊಸ ಗುಡಿಗಳು ಏಳುತ್ತಲೇ ಇವೆಯೆಂದು.

—ಕಾರಂತ.

---









# ನಾನು ಹೊತ್ತ ತಲೆ

ಕೂತುಕೊಂಡು ನಿದ್ದೆ ಮಾಡುವುದಕ್ಕೂ ಅಭ್ಯಾಸ ಬೇಕು. ರಾತ್ರಿ ರೆಯಿಲಲ್ಲಿ ಪ್ರಯಾಣ ಮಾಡುವ ನಮ್ಮಂತಹ ಪುರಂದರ ದಾಸರಿಗಂತೂ ನಿಂತು ನಿದ್ದೆ ಹೋಗುವುದು ಹೇಗೆ ಎಂಬುದೂ ಕೂಡ ಗೊತ್ತಿರಬೇಕಾಗುತ್ತದೆ. ಆದರೆ ಕೂತು ನಿದ್ದೆ ಹೋಗುವವರನ್ನು ನೋಡುವುದಕ್ಕೆ ಬಹಳ ಸ್ವಾರಸ್ಯವಾಗಿರುತ್ತದೆ. ಮುಂದಿನ ಸಲ ಮೂರನೆಯ ತರಗತಿಯಲ್ಲಿ ಪ್ರಯಾಣ ಮಾಡುವಾಗ ನೀವು ನೋಡುತ್ತೀರಿ. ನಿಮ್ಮೆದುರಿಗಿರುವವರು ಐದಾರು ಮೈಲಿಗಳು ಕಳೆದ ಕೂಡಲೇ ಕೊಂಚ ಮೆತ್ತಗಾಗುತ್ತಾರೆ; ಸಪ್ಪೆಯಾಗುತ್ತಾರೆ. ಅವರ ಮಾತಿನಲ್ಲಿ ಉತ್ಸಾಹ ಕಡಿಮೆಯಾಗಿ ಅದರ ವೇಗ ಕುಂದಿ, ಅದರ ತರ್ಕ ತಳಮಳಿಸುತ್ತದೆ. ನೀವು ಅವರೊಂದಿಗೆ ಹೇಳುವ ಮಾತನ್ನು ಅವರು ಲಾಲಿಸುವುದೇ ಇಲ್ಲ. ಎರಡು ಮೂರು ಸಾರಿ ಆಕಳಿಸಿ ಅವರು ಕಿಟಕಿ ಬಾಗಿಲನ್ನು ಕೆಳಕ್ಕಿಳಿಸಿ ಅದರ ಮೇಲೊರಗಿ ರುಮಾಲನ್ನು ತೆಗೆದು ಮಡಿಲಿನಲ್ಲಿರಿಸಿಕೊಳ್ಳುತ್ತಾರೆ. ಮುಖದಲ್ಲಿ ಗಾಂಭೀರ್ಯ ನೆಲೆಸುತ್ತದೆ. ಕಣ್ಣಲ್ಲಿ ವೈರಾಗ್ಯ ತುಂಬುತ್ತದೆ. ತುಟಿಗಳು ಕೆಳಬಿದ್ದು, ಅವರು ನಿದ್ದೆಯಲ್ಲಿ ಮುಳುಗಿ ಕನಸಿನ ಲೋಕಕ್ಕೆ ತಮ್ಮ ಆತ್ಮವನ್ನು ಕರೆದೊಯ್ಯುತ್ತಾರೆ. ಆಯಿತು ಮುಂದಿನ ಸ್ಟೇಷನಲ್ಲಿ ಜನರ ನೂಕು ನುಗ್ಗಾಟ ಹೆಚ್ಚಿದರೂ ಕೂಡ ಅವರು ಗಾಢ ಸಮಾಧಿಯಿಂದ ಏಳುವುದೇ ಇಲ್ಲ.

ಇನ್ನು ಕೆಲವರು ಕಿಟಕಿಯನ್ನು ಕೆಳಕ್ಕಿಳಿಸುವುದೇ ಇಲ್ಲ. ನೆಟ್ಟನೆ ಕುಳಿತಲ್ಲೇ ಕುಳಿತು ಬೆನ್ನೆಲುಬನ್ನು ಬಾಗಿಸದೆಯೇ ನಿದ್ದೆ ಮಾಡಲು ಪ್ರಯತ್ನಿಸುತ್ತಾರೆ. ಇವರ ಪಾಡು ಬಹು ಕಷ್ಟ. ಆದರೆ, ಇಂತಹ ಅಲ್ಲಾಡಿ ನಿದ್ದೆಗಾರರು ನಮ್ಮ ಎದುರಿಗಿದ್ದರೆ ಚೆನ್ನವೇವಿನಹ ನಮ್ಮ ಪಕ್ಕದಲ್ಲೇ ಇದ್ದರೆ ಗ್ರಹಚಾರವೇ ಸರಿ. ಕಳೆದ ತಿಂಗಳು ಒಂದು ಸಾರಿ ನನಗೆ ಈ ಗ್ರಹಚಾರ ಒದಗಿತು. ನನ್ನ ಬಲಗಡೆ ಕೂತಿದ್ದವನನ್ನು ನಿದ್ರಾದೇವಿ ಕಾಡಿಸುತ್ತಿದ್ದದ್ದು ನೋಡಿ ನಾನು ಬೇರೆ ಕಡೆಗೆ ಆಸನ ಬದಲಾಯಿಸಲು ಹವಣಿಸಿದೆ; ಸಾಧ್ಯವಾಗಲಿಲ್ಲ. ಒಂದು ಬೆರಳಷ್ಟು ಜರುಗುವುದಕ್ಕೂ ಕೂಡ ತಾವಿರಲಿಲ್ಲ. ಆಸಾಮಿಯ ತಲೆಬುರುಡೆ ಬಹು ಭಾರ; ಮುಖಕ್ಷೌರ ಮಾಡಿಸಿಕೊಂಡು ತಿಂಗಳಮೇಲೆ ಒಂದು ವಾರವಾಗಿರಬಹುದು; ಹರಿತವಾದ ರೋಮರಾಶಿ ಚಕ್ಅಂತ ನನ್ನ ಬಲಭುಜದ ಮೇಲೆ ಅವನ ಶಿರಸ್ಸು ಬಿದ್ದಾಗಲೆಲ್ಲ ನಾನು ನೋವಿನಿಂದ ಚೀರಿಕೊಳ್ಳುತ್ತಿದ್ದೆ. ಉಳಿದವರಿಗೆಲ್ಲ ಅದೊಂದು ಆಟವಾಗಿ ಹೋಯಿತು. ನಿದ್ದೆಕೋರನ ಬಲಗಡೆ ಖಾಲಿ; ಎಡಗಡೆ ನಾನು, ಬಲಗಡೆಗೆ ಅವನ ತಲೆಬಿದ್ದು, ಅವನು ಕಣ್ಣು ಮಿಟುಕಿಸಿ, ಮುಖವನ್ನೊರಸಿ, ಮತ್ತೆ ನಿದ್ದೆಯ ತೆಕ್ಕೆಗೆ ಸಿಲುಕಿ ಎಡಗಡೆಗೆ ತಲೆ ಬೀಳುವ ಹೊತ್ತಿಗೆ ಸರಿಯಾಗಿ

ನಾನು ಅದನ್ನು ಸ್ವೀಕರಿಸಿ ಚೀರುವುದಕ್ಕೆ ಸಿದ್ಧವಾಗಿರುತ್ತಿದ್ದೆ. ಹತ್ತು ಹದಿನೈದು ಸಲ ಹೀಗೆ ನನ್ನನ್ನು ಚೀರಿಸಿದಮೇಲೆ ಆತ ನನ್ನ ಭುಜದ ಮೇಲಿಂದ ತನ್ನ ತಲೆಯನ್ನುತೆಗಿಯಲೇ ಇಲ್ಲ. ಅದನ್ನು ಹಿಡಿದೆತ್ತಿ ನೂಕಲು ನಾನು ಮಾಡಿದ ಸಾಹಸಗಳೆಲ್ಲವೂ ವ್ಯರ್ಥವಾಯಿತು. ಗಾಡಿಯಲ್ಲಿದ್ದವರು ಯಾರೂ ನನ್ನ ಸಹಾಯಕ್ಕೆ ಬರಲಿಲ್ಲ. ಆತನ ಜೊಲ್ಲು ನನ್ನ ಅಂಗಿಯನ್ನು ನೆನಸಿ ಹಾಳುಮಾಡಿತು. ನೋಡುವುದಕ್ಕೆ ಇವರೇ ಹೆಚ್ಚು ಸ್ವಾರಸ್ಯ. ಜರೀ ರುಮಾಲನ್ನು ಕಳಚದೆ, ಶೀವಿಯಿಂದ ಮಂಡಿಸಿದ್ದರೂ ಕೂಡ ರೆಯಿಲುಗಾಡಿಯ ನಿರಂತರ ತಾಳ ಲಯಗಳಿಗೆ ಎವೆ ಸೋತು ಇವರೂ ಕೂಡ ನಿದ್ದೆಗೆ ಸುಸ್ವಾಗತವೀಯಲೇ ಬೇಕಾಗುತ್ತದೆ. ಬೇಸರ, ನಿರುತ್ಸಾಹ, ವೈರಾಗ್ಯ, ವೇದಾಂತ ಮುಂತಾದ ಚಿಹ್ನೆಗಳು ಇವರ ಮುಖಗಳಲ್ಲೂ ತೋರಿಬರುತ್ತವೆ. ಆ ಮೇಲೆ ಇವರೂ ಕಣ್ಣು ಮುಚ್ಚುತ್ತಾರೆ. ಆದರೆ, ನಿದ್ದೆಯಿಂದ ಭಾರ ಹೆಚ್ಚಿದ ತಲೆಬುರುಡೆಗಳನ್ನು ಹೊರಲಾರದೆ ಇವರ ಕಂಠಗಳು ತತ್ತರಿಸುತ್ತವೆ. ಇಡೀ ತಲೆ ಒಮ್ಮೆ ಬಲಭಾಗಕ್ಕೆ ಬಲು ಬೇಗ, ಇನ್ನೇನು ಮುರಿದು ಬಿದ್ದೀತೋ ಎಂಬಷ್ಟು ಬಾಗುತ್ತದೆ. ಆಗ, ಇವರು ಪಿಳಕ್ಕನೆ ಕಣ್ಣು ಬಿಟ್ಟು ಬುರುಡೆಗಳನ್ನು ಸ್ವಸ್ಥಾನಕ್ಕೆ ತಂದು ನಿಲ್ಲಿಸಿ ಮುಖದ ಬೆವರೊರಸಿಕೊಂಡು ತಮ್ಮ ಅವಸ್ಥೆಯನ್ನು ಯಾರೂ ನೋಡಿ ನಗಲಿಲ್ಲವೆಂದು ಸಮಾಧಾನಪಟ್ಟುಕೊಳ್ಳುತ್ತಾರೆ. ಆ ದೃಶ್ಯ ತುಂಬ ಮನೋಹರವಾಗಿರುತ್ತದೆ. ಆದರೆ, ಮರುಕ್ಷಣದಲ್ಲೇ ತಲೆ ಭಾರವಾಗಿ ಎಡಗಡೆಗೆ ಬಾಗಿ ಇಡೀ ದೇಹವನ್ನೇ ಅತ್ತಲಾಗೆ ಎಳೆದೊಯ್ಯುತ್ತದೆ. ಮತ್ತೆ ಅದೇ ಕಣ್ಣು ಬಿಡಾಟ; ಸ್ವಸ್ಥಾನಕ್ಕೆ ತಂದು ನಿಲ್ಲಿಸಿ ಪೆಚ್ಚಾಗಿ ನಗಾಟ! ಹೀಗೆ ಬಲಕ್ಕೂ ಎಡಕ್ಕೂ ಇವರ ತಲೆಬುರುಡೆಗಳು ತಾರಾಡುತ್ತಾ ತೂರಾಡುತ್ತಾ ಇದ್ದು, ಕಡೆಗೆ ನೆರೆಯವರ ಹೆಗಲ ಮೇಲೆ ಪ್ರತಿಷ್ಠಿತವಾಗುತ್ತದೆ. ಅಲ್ಲಿಗೆ ಮುಗಿಯಿತು ಅವುಗಳ ತಾಂಡವ! ಅಲ್ಲಿಂದ ಮುಂದಕ್ಕೆ ಸಮಾಧಿ ಇದ್ದೇಯಿದೆ. ''ಅಸಹ್ಯ ಮನು ಭೋಕ್ತವ್ಯಂ'' ಎಂದು ಹೇಳಿಕೊಳ್ಳುತ್ತಾ, ನಾನೂ ಅದನ್ನ ಬೆಂಗಳೂರಿಗೆ ಹೊತ್ತು ತಂದೆ. ನನ್ನ ಭುಜಕೀರ್ತಿಯನ್ನು ಮನೆಯಲ್ಲಿ ಎಲ್ಲರಿಗೂ ಹೇಳಿದೆ.

—ಎಸ್. ಕೆ. ಪಾಟೀಲ್.

---

# ರೀಡಿಂಗ್ ರೂಂ

---

ನಮ್ಮೂರು ದೊಡ್ಡದಾದರೂ ಇರುವುದೊಂದೇ ವಾಚನಾಲಯ. ಅದೂ ಕೂಡ ಒಂದು ಕೊನೆಯಲ್ಲಿ. ಬಡಾವಣೆಯಿಂದ ಬರುವವರು ತಲಪುವಷ್ಟರಲ್ಲೇ ಬಾಗಿಲು ಬಂದಾಗಿರುವ ಸಂಭವವೇ ಹೆಚ್ಚು. ವಾಚನಾಭಿರುಚಿಗಿಂತ ಇತರೇ ರುಚಿಗಳ ಬಗ್ಗೆ ಜಾಸ್ತಿ ಅಭಿಮಾನ ಇಟ್ಟಿರುವವರೇ ಹೆಚ್ಚು ನಮ್ಮೂರಲ್ಲಿ. ಈ ಗುಟ್ಟನ್ನ ಅರಿತೋ ಏನೋ, ವಾಚನಾಲಯದ ಪಕ್ಕದಲ್ಲೇ ಒಂದು ಹೋಟಲನ್ನಿಟ್ಟಿದ್ದಾರೆ. ಪುಣ್ಯಾತ್ಮರು ಅದರೊಳಕ್ಕೆ ನುಗ್ಗದೆ, ಮನಸ್ಸನ್ನು ಘಟ್ಟಿಮಾಡಿ ಯಾರಾದರೂ ವಾಚನಾಲಯಕ್ಕೆ ಬಂದರು ಅನ್ನಿ, ಪೇಪರಿನಲ್ಲಿರೋ ಪ್ರಾಪಗ್ಯಾಂಡಾಗೂ, ಕಿವಿಗೆ ಕೇಳಿಸೋ 'ಎರಡು ಮಸಾಲೇ' ಎಂಬ ಕೂಗಿಗೂ ಮೊದುಳಲ್ಲೇ ಕಾಳಗವಾಗಿ, ಬಂದ ದಾರಿಯನ್ನು ಹಿಡಿದುಬಿಡುತ್ತಾರೆ. ನಮ್ಮೂರು ಪೌರಸಭಾ ಪ್ರಭೃತಿಗಳು, ತಮ್ಮ ಕಾರ್ಯಕಲಾಪಗಳಿಗೇನೇ ಕಟ್ಟಡ ಕಟ್ಟಿಸಿಕೊಂಡಿರಲಿಲ್ಲ. ಅಂಥಾದ್ದರಲ್ಲಿ, ರೀಡಿಂಗ್ ರೂಮಿಗೆ ಸ್ವತಂತ್ರವಾದ ಗೂಡಿಗೆಲ್ಲಿ ಅವಕಾಶ? ಆದ್ದರಿಂದಲೇ ಊರಿನ ಒಂದು ಕೊನೆಯಲ್ಲಿದ್ದ ಸಾಹುಕಾರ್ ಕರಿಸಿದ್ದಯ್ಯನ ಮನೆಯನ್ನು ಬಾಡಿಗೆಗೆ ಗೊತ್ತುಮಾಡಿ, ಮಹಡಿ ಮೇಲೆ ಮುನಿಸಿಪಾಲಿಟಿ ಆಫೀಸ್, ಕೆಳಗೆ ವಾಚನಾಲಯ, ಹೀಗೆ ವಿಂಗಡಿಸಿಕೊಂಡಿದ್ದರು. ಎದುರಿಗೆ ಪ್ರೈಮರಿ ಸ್ಕೂಲು; ಪಕ್ಕದಲ್ಲಿ ಫಲಹಾರ ಮಂದಿರ, ಸಾಲದ್ದಕ್ಕೆ, ಸುತ್ತಾಮುತ್ತಾ ಜವುಳಿ ಅಂಗಡಿಗಳ ಸಾಲು, ಹೊಲಿಯೋ ಮಿಷಿಗಳ ಕಿರಿಕಿರಿಯಿಂದ ಕಿವಿಯೆಲ್ಲಾ ತೂತು.

ಮುಂಬಾಗಿಲಿನಿಂದ ಪ್ರವೇಶಿಸಿ ಮುಂದುವರಿದರೆ, ಹಿಂಬಾಗಿಲು. ಮೆಟ್ಟಿಲಿಳಿದರೆ, ಮೇಲ್ಛಾವಣಿ ಇಲ್ಲದ ಒಂದು ವರಾಂಡ; ಸಣ್ಣದೊಂದು ಕಟ್ಟೆ—ಪೇಪರು ಓದಿದಮೇಲಿನ ಹರಟೆಗೆ. ಸುತ್ತ ಹೂವಿನ ಗಿಡಗಳು, ಮೇಲೆ ಚಪ್ಪರದ ದ್ರಾಕ್ಷಿಯ ಬರಿಯ ಚಪ್ಪರ. ತಲೆಯ ಮೇಲೆ ತಲೆ ಬಿದ್ದರೂ ಬೆಳಗ್ಗೆ ಎಂಟು ಗಂಟೆಗೆ ಬಾಗಿಲು ತೆಗೆಯೋದನ್ನ ಲಿಂಗಯ್ಯ ಎಂದೂ ತಪ್ಪಿಸಿಲ್ಲ. ಕರ್ತವ್ಯ ನೆರವೇರಿಸುವುದನ್ನ, ಲಿಂಗಯ್ಯನಿಂದಲೇ ಕಲಿಯಬೇಕು ಕಲಿಯುಗದವರು. ವಾಚನಾಲಯಕ್ಕೆ ಮೊದಲು ಬರುವವರು ಖಾಲಿ ಕೈಚೀಲ ಸಹಿತ ಮಾರ್ಕೆಟ್ಟಿಗೆ ಹೋಗುವ ಮಹಾಶಯರು. ಇವರು ಕೈಗೆ ಸಿಕ್ಕಿದ ಪತ್ರಿಕೆಯೊಂದನ್ನ ಹಿಸುಕಿಹಾಕಿ, ಕಡೆಗೆ ಯಾವತ್ತಿನ ಪೇಪರು, ಅಂತ ನೋಡಿದಾಗ ತಾರೀಖು ಅನ್ನುವ ಪದ ತರ್ಕಾರಿಯನ್ನು ಜ್ಞಾಪಿಸುವುದರಿಂದ, ಅವಸರವಸರವಾಗಿ ಹೊರಟುಹೋಗುತ್ತಾರೆ. ಒಂಬತ್ತೂವರೆ ಹೊತ್ತಿಗೆ ಪ್ರೈಮರಿ ಸ್ಕೂಲ್ ಹುಡುಗರನ್ನ ಆಟಕ್ಕೆ ಬಿಟ್ಟಾಗ, ಚಿಳ್ಳೆಪಿಳ್ಳೆಗಳ ಪ್ರವೇಶ. ದೊಡ್ಡಮನುಷ್ಯರ ಸಹಪಂಕ್ತಿಯಲ್ಲಿ ಪೇಪರು ಹಿಡಿದು ಕೂತು, 'ವಿಸಿಟರ್ಸ್ ಬುಕ್'ನಲ್ಲಿ ವಕ್ರವಾಗಿ ರುಜು ಹಾಕಿ ಹೊರಡುವುದು, ಹುಡುಗರ

ರೂ ಥಿ. ಬಾಲಾಜಿ ಬಾಜೀರಾವ್, ದೂರ್ವಾಸದತ್ತ ಎಂದು ಮುಂತಾದ ರುಜುಗಳನ್ನು ನೋಡಿ ಪೇಷ್ವೆ ಮನೆತನದವರೂ, ಮಹರ್ಷಿಗಳೂ, ನಮ್ಮೂರಿಗೆ ಬಂದಿದ್ದರೆಂದು ಹಲಕೆಲವರು ಭಾವಿಸಿದ್ದಾರೆ. ಅತೀ ಚಿಕ್ಕ ಹುಡುಗರನ್ನ ಲಿಂಗಯ್ಯ, ಕೂಡಲೇ ಹೊರಕ್ಕೆ ಅಟ್ಟಿಬಿಡುವನು. ಬೆಳೆದ ಘಟಿಂಗರನ್ನ ಕಂಡರೆ, ಅವರು ಬೊಂಬೆ ಹರಿಯುವುದನ್ನು ಪತ್ತೆಮಾಡಬೇಕೆಂದು, ಲಿಂಗಯ್ಯ ಅವರ ಸುತ್ತ ಠಲಾಯಿಸುತ್ತಿರುತ್ತಾನೆ.

ಮಧ್ಯಾಹ್ನ ಬಾಗಿಲು ತೆಗೆಯುವುದು ಮೂರು ಗಂಟೆಗೆ. ಆದರೂ ಕೆಲವು ಗಿರಾಕಿಗಳು, ಎರಡು ಗಂಟೆಗೇ ಹಾಜರು, ಬಾಗಿಲು ಕಾಯೋದಕ್ಕೆ. ಇಳಿವಯಸ್ಸಿನವರು ಮಲಗಿದರೆ ನಿದ್ದೆ ಬರುವುದಿಲ್ಲ. ಪಗಡೆ, ಹೆಂಗಸರು ಹಾಸಿಬಿಟ್ಟಿರುತ್ತಾರೆ. ಕಾಲ ಕೊಲ್ಲುವುದಕ್ಕೆ ಹರಟೆ ಮಲ್ಲರು ಯಾರೂ ಇರುವುದಿಲ್ಲ, ಸರಿ, ಬಿಸಿಲಲ್ಲೇ ಲೈಬ್ರರಿ ಕಡೆ ಸವಾರಿ. ಬಾಗಿಲು ತೆರೆಯುತ್ತಲೂ, ಒಂದು ಪೇಪರು ಕೈಗೆ ತೆಗೆದು, ಪ್ರಿಂಟೆಡ್ ಅಂಡ್ ಪಬ್ಲಿಷ್ಡ್ ಪೂರ್ತ ಓದೋವರೆಗೂ ಕೆಳಗೆ ಹಾಕೋಹಾಗಿಲ್ಲ. ಸಂಜೆಯಾಯಿತೆಂದರೆ, ಸಿದ್ದಯ್ಯನವರು, ಸರ್ಕಾರಿ ಸುದ್ದಿಗಳನ್ನು ನೋಡೋದಕ್ಕೆ ಬರುತ್ತಿದ್ದರು. ಕ್ರಿಕೆಟ್ ನ್ಯೂಸಿಗೆ ಕಿಟ್ಟು 'ಪೇಟೆ ಧಾರಣೆ'ಗೆ ಪಟ್ಣಂ ಶೆಟ್ರು. ಇಷ್ಟಾಯಿತೂ ಅಂದರೆ, ಬೇರೊಬ್ಬರೂ ಮೂಸಿನೋಡುತ್ತಿರಲಿಲ್ಲ.

ರೀಡಿಂಗ್ ರೂಮಿನಲ್ಲೇ ಲೈಬ್ರರಿ ಒಂದು ಇತ್ತು. ಅದರ ನಡುನಡುವೆ ಜೋಡಿಸಿದ್ದ ಅಲ್ಮೈರಾಗಳೇ ಊರಿನ ಪುಸ್ತಕ ಭಂಡಾರ. ಅಲ್ಲಿ ಇದ್ದದ್ದು ಆರೇ ಅಲ್ಮೈರಾ. ಒಂದರಲ್ಲಿ, ಹರಾಜಿಗೆ ಸಿದ್ಧವಾಗಿದ್ದ ಹಳೇ ಪೇಪರುಗಳು, ಇನ್ನೊಂದರಲ್ಲಿ ಬೈಂಡಿಗೆ ಸಿದ್ಧವಾಗಿದ್ದ ಹಳೇ ಪುಸ್ತಕಗಳು. ಮತ್ತೊಂದು ಗಾಜುಬಾಗಿಲಿನ ಅಲ್ಮೈರಾದಲ್ಲಿ ಚಾಲ್ತಿ ತಿಂಗಳ ಮಾಸ ಪತ್ರಿಕೆ, ಗೆಜೆಟ್ಟುಗಳನ್ನು ಇಟ್ಟು ಬೀಗ ಬಂಧನಮಾಡಿತ್ತು. ಈ ಅಲ್ಮೈರಾಗಳ ಹಿಂದೆ ಅವಿತುಕೊಂಡು, ಹಲವು ಮುದುಕರು ಪುಳ್ಳಂಗಾಯಿ ಉಂಡೆಗಳನ್ನು ಬಾಯಿಗೆ ಚಿಮ್ಮಿಸುತ್ತಿದ್ದರು. ಲಿಂಗಯ್ಯನೂ ಆಗಾಗ ಅಲ್ಲಿ ನಿಂತು ಮೂಗಿಗೆ ನಶ್ಯವನ್ನು ತುಂಬಿಸುತ್ತಿದ್ದ. ನಶ್ಯಕ್ಕಾಗಿ ಲಿಂಗಯ್ಯ ಬಂದವರನ್ನು ಬಹುವಾಗಿ ಕಾಡಿಸುವುದರಿಂದ ಈಚೆಗೆ ಅನೇಕ ವೃದ್ಧರು ವಾಚನಾಲಯಕ್ಕೆ ಬರುವುದನ್ನೇ ಬಿಟ್ಟುಬಿಟ್ಟಿದ್ದಾರಂತೆ. ಅಲ್ಲದೆ, ಪಕ್ಕದ ಹೋಟಲು ಮೇಜಿನ ಮೇಲೆ ದಿನವೂ ಹೊಸ ಪೇಪರು ಬಿದ್ದಿರುವುದರಿಂದಲೂ ಅಲ್ಲಿ ಖಾಲಿ ದೋಸೆಗೆ ಮೂರೇ ಮೂರು ಕಾಸಾದ್ದರಿಂದಲೂ ವಾಚನಾಲಯಕ್ಕೆ ನುಗ್ಗುವವರು ಕಡಿಮೆಯಾಗಿದಾರಂತೆ.

—ಕಂಠಿ.

---o---



“ಅಪ್ಪಾ, ಇನ್ನು ಮೇಲೆ ಸಕ್ರೆ ಬೆಲೆ, ಕಾಫಿ ಬೆಲೆ, ಸೌದೆ, ಗೋಧಿ, ತರ್ಕಾರಿ ವಿಚಾರ ಮಾತಾಡೋದಾಗಿದ್ರೆ ನನ್ನ ನಿಂಜೊತೇಲಿ ವಾಕಿಂಗ್ ಕರ್ಕೊಂಡು ಬರಬೇಡ.”

# ಲಿಂಗಿಗೊಂದು ಸೀರೆ

ನಂಗೂ ಲಿಂಗಿಗೂ ಲಗ್ನ ಆದ ಲಾಗಾಯಿತು ಎಂಟು ಹತ್ತು ವರ್ಷ ನಮ್ಮ ಗಾಡಿ ಸರಾಗವಾಗೀನೇ ಹಳ್ಳ ದಿಣ್ಣೆ ದಾಟಕೊಂಡು ಹೋಯಿತು. ಹಗಲೂ ರಾತ್ರಿ ನನಗೆ ಅವಳ ಯೋಚನೇನೆ! ಅವಳಿಗೂ ಮುಕ್ಕಾಲು ಪಾಲು ನನ್ನ ಯೋಚನೆಯೇ ಇದ್ದಿರಬೇಕು. ತುಂಬಾ ಅನ್ಯೋನ್ಯ ನಾವು. ಒಂದು ದಿನ ಕಾರ್ಖಾನೆಯಿಂದ ಹಿಂತಿರುಗಿದಾಗ ಅಂಗಡಿ ಬೀದಿ ಮೇಲೆ ಬಂದೆ. ಜೇಬಲ್ಲಿ ತಿಂಗಳ ಸಂಬಳವಿತ್ತು. ನಾನು ಮನೆಗೆ ಹೋದಾಗ ಬಾಗಿಲು ತೆರೆಯುತ್ತಲೂ ಲಿಂಗೀಗೆ ಡಂಗ್ ಮಾಡಬೇಕು ಅನ್ನಿಸಿತು. ನೆಟ್ಟಗೆ ಜವಳಿ ಅಂಗಡಿಗೆ ನುಗ್ಗಿದೆ. ಹಂಗೇನೇ ಮಿಣ ಮಿಣ ಮಿಣಾ ಅಂತ ಬೀರೂನೆಲ್ಲ ಒಂದೊಂದಾಗಿ ನೋಡುತ್ತಾ ನಿಂತೆ. ಏನು ಬೇಕಣ್ಣ, ಅಂದ್ರು ಸೆಟ್ರು, ನನ್ನ ಕಡೆ ಮೂತಿ ತಿರುಗಿಸಿ. "ಒಂದು ಸೀರೆ ಬೇಕಲ್ರಿ?" ಅಂದೆ. ಸೆಟ್ರು ನಕ್ಕು ಬಿಟ್ಟರು. "ನನಗಲ್ರೀ ಸೆಟ್ರಿ! ನನ್ನ ಮನೆ ಹೆಂಗಸ್ರಿಗೆ" ಅಂದೆ. ಎಂಥಾ ಸೀರೆ, ಅಂದ್ರು ಅವರು, ಎದ್ದು ಬಂದು. ನನಗೆ ಗೊತ್ತಿಲ್ಲ ಸೆಟ್ರಿ! ಮೂರು ಹೊತ್ತೂ ಸೀರೆ ವ್ಯಾಪಾರದಲ್ಲಿರೋ ನಿಮಗೆ ಗೊತ್ತಿಲ್ಲವೆ? ಕೊಡಿ ಒಂದು ಒಳ್ಳೇದು, ಅಂದೆ. ನನ್ನೆದುರಿಗಿದ್ದ ಬೀರು ಬಾಗಿಲು ತೆಗೆದು ಹತ್ತು ಹನ್ನೆರಡು ಸೀರೆಗಳನ್ನ ಕೆಳಗಿಟ್ಟು, ಕೂತುಕೊ, ಬಾ ಅಣ್ಣ, ಅಂದ್ರು. ಇನ್ನೂ ಕೊಂಚ ಗೆರೆಗೆರೆಯಾಗಿ ಹೂವು, ಕಾಯಿ, ಎಲೆ, ಬಾಂಬು, ಹಾವು ಚೇಳು ಇರುತ್ತದಲ್ಲಾ ಅಂತಾದ್ದಿಲ್ಲವೇ, ಅಂದೆ. ಐದಾರು ಹೊಸ ತರಹದ್ದು ತಂದಿರಿಸಿದರು. ಇಂಥಾದ್ದಲ್ಲ ಸೆಟ್ರಿ! ಬೆಲೆ ಕೊಂಚ ಜಾಸ್ತಿಯಾದರೂ ಪರವಾಗಿಲ್ಲ, ಥಳಕಾಗಿ ಕಾಣಬೇಕು, ತುಂಬಾ ಬಜಾರಿಯಾಗಿರಬಾರದು, ಬಣ್ಣ ಖಾತ್ರಿಯಾಗಿ ಒಳ್ಳೇ ಚಂದಾಗಿರಬೇಕು ಅಂದೆ. ಹಾಗಾದರಿದನ್ನು ನೋಡಿ, ಅಂತ ಒಂದನ್ನ ನನ್ನ ಕೈಲಿಟ್ಟರು. "ಬಣ್ಣ? ಘಟ್ಟಿ! ಜರಿ? ಹರಿದರೂ ಹೋಗೋಲ್ಲ!" "ನೂಲು? ೨೦೦ ನೇ ನಂಬರು! ಬಾಳಿಕೆ? ಐದು ವರ್ಷ ಗ್ಯಾರಂಟಿ, ಆರನೇ ವರ್ಷ ಹಳೇ ಸೀರೇನ ಕೊಡಿ, ನಾವು ತೆಗೆದುಕೊಳ್ಳುತ್ತೇವೆ!" "ಬೆಲೆ? ೨೫ ರೂಪಾಯಿ!" "ಚೆನ್ನಾಯಿತು! ಇದೆಂಥಾ ದರೋಡೆ ಸೆಟ್ರಿ? ೨೫ ರೂಪಾಯಿಗೆ ೧೦ ನಿಕ್ಕರ್ ಹೊಲಿಸಬಹುದಲ್ಲಾ ನಾನು" "ಹೊಲಿಸಿಕೊಳ್ಳಿ, ನಾನು ಬೇಡ ಅಂದೆನೇ?" ಅಂದ್ರು ಸೆಟ್ರು. ನಾನು ನಕ್ಕುಬಿಟ್ಟೆ. "ಒಂದು ಮಾತು ಸೆಟ್ರಿ! ಮನೆ ಹೆಂಗಸ್ರು ಒಪ್ಪದೆ ಇದ್ದರೆ, ಬೆಳಗ್ಗೆ ತಂದುಕೊಟ್ಟು ಬಿಡುತ್ತೇನೆ. ಆಗ ದುಡ್ಡು ಹಿಂದಕ್ಕೆ ಕೊಡುತ್ತೀರೋ" ಅಂದೆ. "ಆಗಲಿ, ಅಂಗಡಿ ಬಾಗಿಲು ತೆಗೆದ ತಕ್ಷಣ ಬರಬೇಡಿ. ಹತ್ತು ಹತ್ತೂವರೆ ಗಂಟೆಗೆ ಬನ್ನಿ" ಅಂದ್ರು. ಒಳ್ಳೆಯವರು ಸೆಟ್ರು!

ಆ ಸೀರೆಯನ ಮನೆಗೆ ಸಾಗಿಸುತ್ತಿದ್ದಾಗ ರಸ್ತೆಯಲ್ಲಿ ಹೋಗುವವರೆಲ್ಲರೂ ನನ್ನನ್ನೇ, ಅದನ್ನೇ, ನೋಡಿ ಅಸೂಯೆ ಪಡುತ್ತಿದ್ದರು ಅಂತ ನನಗೆ ತೋರಿತು. ಎಷ್ಟು ಪುಣ್ಯವಂತ, ಹೆಂಡತಿಗೆ ಹೊಸ ಸೀರೆ, ಸುಖವಾದ ಸಂಸಾರ, ಅನುಕೂಲ ದಂಪತಿಗಳು,—ಅಂತ ಅವರು ಹೇಳುತ್ತಿದ್ದಹಾಗೆ ನನಗೆ ಕೇಳಿಸಿತು. ಮನೆ ಬಾಗಿಲು ತೆರೆದೇ ಇತ್ತು. ಅಡಿಗೆ ಮನೆಯಲ್ಲಿ ಲಿಂಗಿ ಇರಲಿಲ್ಲ. ನಲ್ಲಿಯ ಹತ್ತಿರವೂ ಕಾಣೆ. ಕರು ಬಿಟ್ಟು ಹಾಲು ಕರೆಯುತ್ತಿದ್ದಳೋ ಏನೋ ಅಂತ ನೋಡಿದೆ. ಊ ಹುಂ, ಅಲ್ಲೂ ಇಲ್ಲ. ನನಗೆ ಗಾಬರಿಯಾಯಿತು. ಮಂಚದ ಕಡೆ ಇಣಿಕಿದೆ. ಅಲ್ಲಿಂದ ಬಿಕ್ಕಿ ಬಿಕ್ಕಿ ಬರುತ್ತಿದ್ದ ಒಂದು ಅಳು ಕೇಳಿಸಿತು. ಲಿಂಗೀ, ಅಂದೆ. ಒಳಗಿಂದ ಒಂದು ಸಿಂಹ ಗರ್ಜನೆ ಕೇಳಿಸಿತು. ಹತ್ತಾರು ಸಿಡಿಲುಗಳು ಒಂದೇ ಸಾಲಾಗಿ ನನ್ನ ಕಿವಿಯ ಮೇಲೆ ಬಡಿದುವು. "ಯಾಕೆ ಇಷ್ಟು ತಡವಾಯಿತು?" ಎಂಬ ಆರ್ಭಟ ಕೇಳಿಸಿತು. "ಎಲ್ಲಿಗೆ ಹೋಗಿದ್ದಿರಿ?" ಎಂಬ ಕೂಗಿಗೆ ನಾನು ಉತ್ತರ ಕೊಡುವುದಕ್ಕೆ ಮೊದಲೇ, "ಓಹೋ! ಇದು ಬೇರೆ ಕೈಯ್ಯಲ್ಲಿ! ಏನದು ಹಾಳು ಕಟ್ಟು?" ಅಂತ ಅದನ್ನ ಲಿಂಗಿ ಅಪಹರಿಸಿಬಿಟ್ಟಳು. "ನಿನಗೊಂದು ಸೀರೆ!" ಎಂದು ನಾನು ಬಲು ಬಲು ನಯವಾಗಿ, ಬೆಣ್ಣೆಯ ಹಾಗೆ, ಬೆಕ್ಕಿನ ಬಾಲದ ತುದಿಯ ಹಾಗೆ, ನುಣ್ಣಗೆ ತಣ್ಣಗೆ ಹೇಳಿದೆ. "ಹಾಳು ಸೀರೆ ನನಗೆ ಯಾಕೆ? ಯಾರು ತರಹೇಳಿದರು ಇದನ್ನ?" ಅಂತ ಕಿರಿಚುತ್ತಾ, ಲಿಂಗಿ ಆ ಕಟ್ಟನ್ನ ನನ್ನ ಕೈಯಿಂದ ಕಿತ್ತು, ಬಿಚ್ಚಿ, ಹಿಂಡಿ, ಎಳೆದು, ಹರಿದು, ಚೂರು ಚೂರುಮಾಡಿ ನನ್ನ ಮುಖಕ್ಕೆಸೆದಳು. ಆ ಮೇಲೆ ಹಾಸಿಗೆ ಮೇಲೆ ಧೊಪ್ ಅಂತ ಬಿದ್ದು ಒಂದೇ ಸಮನೆ ಅಳುವುದಕ್ಕೆ ಪ್ರಾರಂಭಿಸಿದಳು. ನಾನೂ ಅಲ್ಲೇ ಕುಳಿತೆ.

ಲಿಂಗಿಯ ರೋದನ ಕೇಳಿ ಅಕ್ಕಪಕ್ಕದ ಹೆಂಗಸರೆಲ್ಲ ಓಡಿಬಂದರು. ಅಲ್ಲಿ ಹರಿದು ಬಿದ್ದಿದ್ದ ಹೊಸ ಸೀರೆಯನ್ನು ಕಂಡು ಅವರು ಕಣ್ಣೀರು ಬಿಟ್ಟರು. "ಇಂಥಾ ಗಂಡಸರೂ ಉಂಟೆ! ಪಾಪ! ಅವಳು ಆಸೆಯಾಗಿ ಒಂದು ಸೀರೆ ತೆಗೆದುಕೊಂಡರೆ ಸಾಯಂಕಾಲ ಬಂದು ನೋಡಿ ಸಂತೋಷಪಡದೆ, ಹರಿದು ಹಾಕಿದೆ, ಕಪಿ!" ಅಂತ ಅವರು ಅಂದುಕೊಂಡದ್ದು ನನ್ನ ಕಿವಿಗೆ ಬಿತ್ತು.

ನಾನು ಮಾತನಾಡಲಿಲ್ಲ. ನನ್ನ ತಲೆ ತಾನಾಗಿಯೇ ಕುಸಿದು ಬಿತ್ತು.

—ಮೆಕಾನಿಕ್ ಮರಿಸಾಮಿ.

———

# "ಶು ನ ಕಾ ನು ಭ ವ ಂ"

"ಅಣ್ಣಾ"; "ಅಣ್ಣಾ ಾ ಾ" ಕಂಠಿಯ ಕೂಗು; ತಗ್ಗಿ ಬಾಗಿದ ಧ್ವನಿಯಲ್ಲಿ ನಮ್ಮ ಮನೆ ಹೊರಬಾಗಿಲಿನಿಂದ ಬಳುಕುತ್ತಾ ಬಂತು ಅಡಿಗೆ ಮನೆಗೆ. ನಾನು ಊಟಕ್ಕೆ ಕೂತಿದ್ದೆ. ಆಕೆ ಬ್ಯಾಳೀ ಹುಳಿ ಬಡಿಸುತ್ತಾ ಇದ್ದಳು. ಆಗಲೇ ಆಫೀಸಿಗೆ ಹೊತ್ತಾಗಿ ಹೋಗಿತ್ತು. ಕಂಠಿ ಯಾವತ್ತೂ ಅಷ್ಟು ನಯವಾಗಿ ನನ್ನನ್ನು ಕರೆದದ್ದೇ ಇಲ್ಲ! ಮಾತಿಗೆ ಮೊದಲೇ ಮೇಲೆ ಬೀಳುತ್ತಿದ್ದ ಸಿಡಿಲು ಮರಿ ನನ್ನ ಕುಮಾರ. ನನಗೆ ಆಶ್ಚರ್ಯವೇ ಆಯಿತು. ಎಂದೂ ಇಲ್ಲದ ನಯವಿನಯ ಯಾಕೆ ಇವತ್ತು ಅಂತ. ಜೊತೆಗೆ ಸಂತೋಷವೂ ಆಯಿತು. ಒಂದು ದಿನವಾದರೂ ನನ್ನನ್ನು ಅಷ್ಟು ಮುದ್ದಾಗಿ ನನ್ನ ಚಿನ್ನ ಕರೆಯಿತಲ್ಲಾ ಅಂತ. "ಏನೋ ಮಗೂ ೂ" ನಾನೂ ಮುದ್ದಾಗಿಯೇ ಉತ್ತರವಿತ್ತೆ. "ಏನೂ ಇಲ್ಲಾಣ್ಣಾ ಾ ಾ" ಅದೇ ನಮ್ರತೆ, ಒಲವು, ಮುದ್ದು ಮಾತು........"ಅಯ್ಯಯ್ಯೊ! ಇದೇನು ಬಂತೋ ನಿನಗೆ....ಹೋಗ್....ಮೊದಲು ಹೊರಗೆ ಹೋಗ್...." ಅಂತ ಗದರಿಸಿದೆ. ಒಂದು ದಾರದಲ್ಲಿ ಕತ್ತನ್ನು ಬಿಗಿದು ಕಂಠಿ ಎಳೆದುಕೊಂಡು ಬಂದಿದಾನೆ ಒಂದು ಕುನ್ನೀನ. ಕುಯ್ಯೋ ಮರ್ರೋ ಅಂತ ಕಿರಿಚುತ್ತಾ ಕಂಠಿಯಿಂದ ತಪ್ಪಿಸಿಕೊಳ್ಳಲು ಸರ್ವಶಕ್ತಿಯನ್ನೂ ಪ್ರಯೋಗಿಸಿ ಸೆಳೆಯುತ್ತಿತ್ತು. ಅವರಿಬ್ಬರಿಗೂ ನಡೆದ "ಟಗ್ ಆಫ್ ವಾರ್‌ನಲ್ಲಿ ಕುನ್ನಿ ಕತ್ತು ಕಿತ್ತುಹೋಗದೇ ಇದ್ದದ್ದೇ ಆಶ್ಚರ್ಯ. "ಎಲ್ಲಿ ಸಿಕ್ತೋ ಈ ಬೀದಿ ನಾಯಿ, ಹೋಗು....ಬೀದೀಲಿ ಬಿಟ್ಟು ಬಿಟ್ಟು ಬಾ" ಅಂತ ಎಲೆ ಮುಂದೆ ಕೂತೇ. "ಇಲ್ಲಾಣ್ಣಾ.....ಮತ್ತೆ.....ನಮ್ಮ ಮನೆಯಲ್ಲಿ ಮಾತ್ರ ನಾಯಿ ಮರೀನೇ ಇಲ್ಲಾಣ್ಣಾ. ಕೇ.ಡಿ., ಎಂ.ಕೆ., ಪಿ.ಎಸ್. ಇವರ ಮನೇಲೆಲ್ಲಾ ನಾಯಿ ಇದೆ ಅಣ್ಣಾ. ನನಗೆ ಶುದ್ಧ ಅವಮಾನಾಣ್ಣಾ ಅವರೆಲ್ಲಾ ಜಂಭವಾಗಿ ದಿನಾ ಸಾಯಂಕಾಲ ವಾಕಿಂಗ್ ಕರ್ಕೊಂಡು ಹೋಗ್ತಾರಣ್ಣಾ........" ಅಂತ ರಾಗ ಎಳೆದ. "ಅವರ ಮನೆಯಲ್ಲೆಲ್ಲಾ ಜಾತಿ ನಾಯಿ ಇದೇ ಕಣೋ........ಇದೆಲ್ಲೋ ಬೀದಿ ನಾಯಿ........ಕಂತ್ರಿ ಹೋಗೋ ಮೊದಲು" ಅಂದೆ. "ಇಲ್ಲಾಣ್ಣಾ ಇದೂ ಜಾತೀ ನಾಯೀನೇ" ಅಂತ ಆ ನಾಯಿಯ ಎರಡೂ ಕಿವಿಗಳನ್ನು ಎತ್ತಿ ತೋರಿಸಿದ. ನಿಜ; ಅದು ಯಾಕೋ ಅರಚಲೇ ಇಲ್ಲ. ನಾನು ಕೈ ತೊಳೆದುಕೊಂಡು ಬರುವುದರಲ್ಲಿ ಕಂಠಿ ಆ ನಾಯಿಯನ್ನು ಎಳೆದುಕೊಂಡು ಹೋಗಿ ಕಂಬಕ್ಕೆ ಕಟ್ಟಿಹಾಕಿದ್ದ. ಅಲ್ಲಿ ಆಗಲೇ ಸೇರಿಬಿಟ್ಟಿದ್ದರು; ಯಂಕ, ನಾಣಿ, ಶೀನ ಅವನ ಗೆಳೆಯರು. ಒಬ್ಬ ಆಗಲೇ ನಾಯಿ ಬಾಲಕ್ಕೆ ಒಂದು ಹೂವು ಕಟ್ಟಿದ್ದ. "ಏನೋ........ತೊಗೊಂಡು ಹೋಗ್ತೀಯೋ........ನಾನೇ ಎತ್ತಿ ಬಿಸಾಕಲೋ" ನಾನೂ ಬಿಡಲಿಲ್ಲ; ಗದರಿಸಿದೆ. "ಇಲ್ಲಾಣ್ಣಾ........ಇದು ಇದ್ದೇ ಇರಬೇಕು ಅಣ್ಣಾ........ನಾವೂ "ನಾಯಿಗಳಿವೆ ಎಚ್ಚರಿಕೆ" ಅಂತ ಬೋರ್ಡು ಹಾಕೋಣ ಕಳ್ರು ಗಿಳ್ರು ಬರೋಲ್ಲಾ ಅಣ್ಣಾ.......

ಮತ್ತೆ ಭಿಕ್ಷೇಗೂ ಯಾರೂ ಬರೋದಿಲ್ಲಾ. ನೀನು ಬೋರ್ಡು ಬರೆಸೋವರೆಗೆ ನಾನೇ ಚಾಕ್‌ಪೀಸ್‌ನಲ್ಲಿ ಬರೆದಿರ್‍ತೀನಿ ಅಣ್ಣಾ" ಅಂತ ಹೊರಟೇಬಿಟ್ಟ. ಬೀದಿ ಬಾಗಿಲಿನಲ್ಲಿ ದಪ್ಪ ಅಕ್ಷರಗಳಲ್ಲಿ "ನಾಯಿಗಳಿವೆ ಹುಷಾರ್" ಅಂತ ಬರೆದು, ಕಳ್ಳ ನನ್ನು ಹೆದರಿಸುವುದಕ್ಕೋಸ್ಕರ ಬೊಗಳುತ್ತಿರುವ ಒಂದು ನಾಯಿ ಚಿತ್ರಾನೂ ಬರೆದ.

ಒಂದು ವಾರವೆಲ್ಲಾ ನಮಗೆ ಜಾಗರಣೆ. ಆ ಪರಮಾತ್ಮ ಅದು ಯಾಕೆ ಕೊಟ್ನೋ ಆ ಶಾರೀರಾನ ನಾಯಿ ಮರೀಗೆ. ಅದೆಷ್ಟು ಅರಚಿದರೂ ಸುಸ್ತಾಗ ಬೇಡವೇ ಅದಕ್ಕೆ? ಮೂತಿ ಮುಂದೆ ಹಾಲಿಟ್ಟೆವು. ಬಯ್ದು ನೋಡಿದೆವು. ಬೊಗಳಿದೆವು, ಅಂಗಲಾಚಿದೆವು, ಏನಿಲ್ಲ. ಅಖಂಡವಾಗಿ ಕಾಲಭೈರವಿ ರಾಗಾ ಲಾಪನೆ ನಡೀತಿತ್ತು. ನಮ್ಮ ಮನೆ ಸುತ್ತಮುತ್ತ ಇರೋ ಸದ್ಗೃಹಸ್ಥರೂ ನಾಯಿ ಸಾಕಿದಾರೆ. ಸರಿ ಒಂದರ ಬೊಗಳನ್ನು ಕೇಳಿ, ಇನ್ನೊಂದು ಹೀಗೆ ಎಲ್ಲಾ ನಾಯಿಗಳೂ ಒಟ್ಟಿಗೆ ಭೋಗುಟ್ಟುತ್ತಿದ್ದುವು ಅಹೋ ರಾತ್ರಿ. ನಮ್ಮ ಮನೆಗೆ ಯಾರಾದರೂ ಅಪರೂಪಕ್ಕೆ ಬಂದರೆ ಅವರ ಹತ್ರ ಮಾತಿಗೂ ಸಾಧ್ಯವಾಗು ತ್ತಿರಲಿಲ್ಲ.

ಕಂಠಿ, ಅವನ ಪೋಲಿ ಪಟಾಳಂ ಮಾತ್ರ ಸದಾ ಅದರ ಜೊತೆಗೆ ಇರು ತ್ತಿದ್ದರು. ಅದರ ಕತ್ತಿಗೆ ಒಂದು ಪಟ್ಟಿ; ಅದಕ್ಕೊಂದು ಮಣಿ 'ಟೈಗರ್' ಅಂತ ಹೆಸರು. ಒಂದು ಚೈನು ಬೇರೆ........ಸಂಜೆ ವಾಕಿಂಗ್, ಅದರ ಕಾಲಿಗೆ ಏಟು ಹೊಡೆದೂ ಹೊಡೆದೂ "ಷೇಕ್‌ಹ್ಯಾಂಡ್" ಮಾಡೋದೂ ಕಲಿಸಿದ್ರು. "ಉಟ್, ಸಿಟ್" ಇತ್ಯಾದಿಗಳ ಪಾಠಗಳೂ ಆಯಿತು. ಚೆಂಡು ಗಿಂಡು ಎಸೆದು ಅದನ್ನು ಕಚ್ಚಿ ತರಲು ಅಭ್ಯಾಸ ಮಾಡಿಸಿದರು. ಹಾಗೂ ಹೀಗೂ ಆ ಶ್ವಾನ ನಮ್ಮ ಮನೆಗೆ ಒಗ್ಗಿ ಹೋಯಿತು. ನನ್ನನ್ನು ಕಂಡರೂ ಬಾಲ ಅಲ್ಲಾಡಿಸುವುದಕ್ಕೆ ಮೊದಲು ಮಾಡಿತು. ಬರಬರುತ್ತಾ ತನ್ನ ನಿಜ ರೂಪವನ್ನೇ ತಾಳಿತ್ತು. "ರಾಯರ ಕುದುರೆ.......ಆದಂತೆ" ಚಿಕ್ಕಂದಿನಲ್ಲಿ ಒಂದು ರೀತಿಯಲ್ಲಿ ಮುದ್ದಾಗಿದ್ದ ಕುನ್ನಿ ಹರ್ಷ ಕಂತ್ರಿಯಾಯಿತು.

ಏನೋ ಮೂರರ ಜೊತೆಗೆ ನಾಕು ಅಂತ ನಾನು ಸುಮ್ಮನಿದ್ರೆ ಗ್ರಹಚಾರ ಬಿಟ್ಟರೆ ತಾನೆ? ಸಹವಾಸ ದೋಷ; ಟೈಗರಿಗೂ ಕಜ್ಜಿ ಬರೋಣವೇ? ಮೊದ ಲೇನೋ ಸುಮ್ಮನಿದ್ದೆವು. ಆದರೆ ಬರಬರುತ್ತಾ ಕಜ್ಜಿ ಮೈಗೆಲ್ಲಾ ಹತ್ತಿತ್ತು. ಸದಾ ಅಂಗಾಂಗಗಳನ್ನು ಕಚ್ಚಿಕೊಳ್ಳುತ್ತಾ ಬಿದ್ದಿತು ಆ ಶುನಕ. ಯಾರೋ ಒಬ್ಬರು "ಈ ರೋಗ ಮನುಷ್ಯನಿಗೂ ಹತ್ತುತ್ತದಯ್ಯಾ" ಅಂತ ಹೆದರಿಸಿದರು. ಏನು ಮಾಡೋದು ಅಂತ ತೋಚಲಿಲ್ಲ. ಎಲ್ಲಾದರೂ ದೂರ ಕರೆದುಕೊಂಡು ಹೋಗಿ ಬಿಟ್ಟುಬರೋಣ ಅಂತ ಊರಾಚೆ ಬಿಟ್ಟು ಊರಿನ ಗಲ್ಲಿಗಳೆಲ್ಲಾ ಸುತ್ತಿ ಕೊಂಡು ಮನೆಗೆ ಬಂದೆ; ನನಗಿಂತ ಮುಂಚೆ ಹಾಜರ್ ಮನೆಮುಂದೆ. ವಿಷ

ಹಾಕಿಬಿಡೋಣ ಅಂದ್ರೆ, ಪ್ರಾಣಿಹತ್ಯೆ ಅಂತ ಆಕೆ ಆಕ್ಷೇಪಣೆ. "ಅಣ್ಣಾ, ನಾಯಾ ಸ್ಪತ್ರೆಗೆ ಕರ್ಕೊಂಡು ಹೋಗಣ್ಣಾ ನಾಸಿ ಆಗುತ್ತೆ........ಸುಬ್ಬು ಮನೆ ನಾಯೀಗೂ ಹೀಗೇ ಆಗಿತ್ತು" ಅಂದ ಕಂಠಿ.

ಇನ್ನೇನು ಮಾಡೋದು ಬಂದದ್ದೆಲ್ಲಾ ಬರಲಿ ಅಂತ ಬೆಳಿಗ್ಗೆ ಹೊರಟೆ. ಚೈನಿನಲ್ಲಿ ಕಟ್ಟಿಹಾಕಿ ಕೈಯ್ಯಲ್ಲಿ ಹಿಡಿದುಕೊಂಡು ಹೊರಟರೆ ಅವಮಾನ ಅಂತ ಹಾಗೇ ಹೊರಟೆ. ಅವತ್ತು ನನಗಾದ ಅವಮಾನ, ಅವಸ್ಥೆ ಅನಾಥರಕ್ಷಕ ಯಾರಿಗೂ ಬೇಡ. ಆ ಹಾಳು ನಾಯೀನೋ ಮಹಾ ಜನಗಳು ಎಲ್ಲ ಅದು ನನ್ನದಲ್ಲ ಅಂತ ತಿಳಿದುಕೊಳ್ಳುತ್ತಾರೆ ಅಂತ ಹೆದರಿ ನನ್ನ ಸುತ್ತಾನೇ ಸುಳಿದಾಡು ತ್ತಿತ್ತು. ಗೌರವಸ್ಥರು ಯಾರಾದರೂ ಬಂದರೆ, ಅದು ನನ್ನದಲ್ಲ ಅಂತ ನಾನು ಎಲ್ಲೋ ನೋಡುತ್ತಾ ನಟಿಸುತ್ತಿದ್ದರೆ ಅದು ಬಿಟ್ಟರೆ ತಾನೆ? ನನ್ನ ಕಾಲು ಸಂದಿ ಯಲ್ಲೇ ನುಸಿಯುತ್ತಿತ್ತು. ನನ್ನ ಎದುರಿಗೆ ನಿಂತು ಅಡ್ಡಗಟ್ಟಿ, ಬಾಲ ಅಲ್ಲಾಡಿ ಸುತ್ತಿತ್ತು. ಅಲ್ಲಲ್ಲೇ ನಿಂತು ನನ್ನನ್ನು ನೋಡಿ ಪ್ರೇಮದಿಂದ ನೀಳವಾಗಿ ಬೊಗಳು ತ್ತಿತ್ತು. ಎಲ್ಲರೂ ನನ್ನ ಕಡೆ ನೋಡುವವರೇ! ಅವರೆಲ್ಲರ ಮುಖಭಾವ ಒಂದೇ! "ಇದೆಲ್ಲೀ ಅವಸ್ಥೆ ಬಂತಯ್ಯಾ ನಿನಗೆ'' ಅಂತ ಸಹ ತಪಿಸುತ್ತಿದ್ದರು. ಅನುಕಂಪ ಮಿಡಿಯುತ್ತಿತ್ತು. ನಾಯಿ ಎಲ್ಲಾದರೂ ಮೈಮರೆತು ನಿಂತಾಗ ನಾನು ಬೇಗ ಬೇಗ ಹೆಜ್ಜೆ ಹಾಕುತ್ತಿದ್ದೆ. ಆದರೆ, ಹಾಳಾದ್ದು ಬೊಗಳುತ್ತಾ ನಾಗಾಲೋಟ ದಿಂದ ನನ್ನನ್ನು ಅಟ್ಟಿ ಬರುತ್ತಿತ್ತು. ''ಹುಚ್ಚು ನಾಯಿ ಬುದ್ಧೀ........ಹುಷಾರಾ ಗಿರಿ ಕಚ್ಚಿದರೆ ನಿಮಗೂ ಹುಚ್ಚು ಹಿಡಿಯುತ್ತೆ'' ಅಂತ ಎಚ್ಚರಿಕೆ ಕೊಟ್ಟ. ಆಗಾಗ ಹಿಂದೆ ಬಂದು ಹಾರಿ ನನ್ನ ಕೈಯ್ಯನ್ನು ನೆಕ್ಕುತ್ತಿತ್ತು. ಗದರಿಸಿ ಓಡಿಸೋಣ ಅಂತ ಕೈಗೆ ಕಲ್ಲು ತೆಗೆದುಕೊಂಡರೆ "ಅದ್ಯಾಕೆ ಸಾಮಿ, ಕುನ್ನಿ ಮೇಲೆ ಬ್ರಹ್ಮಾಸ್ತ್ರ'' ಅಂದ. ಮಗುವನ್ನು ನಡೆಸಿಕೊಂಡು ಹೋಗುತ್ತಿದ್ದ ಒಬ್ಬಾಕೆ ''ಇಲ್ಲಬಾ ಮಗೂ, ಕಚ್ಚಿ ನಾಯಿ ಕಚ್ಚಿಬಿಡುತ್ತೆ'' ಎಂದು ಎಚ್ಚರಿಸಿ, ಮಗುವನ್ನು ಎತ್ತಿ ಬಿಗಿದಪ್ಪಿ ಮುತ್ತಿ ಟ್ಟರು. ನಾಚಿಕೆಯಿಂದ ತಲೆತಗ್ಗಿಸಿದೆ.

ನನ್ನ ಗ್ರಹಚಾರ ಏನು ಅಂತೀರಿ! ಯಾವತ್ತೂ ಸಿಕ್ಕದ ಗೆಳೆಯರೆಲ್ಲಾ ಅವತ್ತೇ ಸಿಕ್ಕೋಣವೇ? "ಓಹೋ ಹೋ! ಏನಯ್ಯಾ ಅಪರೂಪ ದರ್ಶನ, ಛಿ!! ಇದು ಯಾವುದಯ್ಯಾ ಕಜ್ಜೀನಾಯಿ. ನಿನ್ದೇನಯ್ಯಾ!'' ಕುಹಕವಾಗಿ ಗಹಗಹಿ ಸುತ್ತಾ ಮುಂದೆ ಸಾಗುತ್ತಿದ್ದರು. ಕೆಲವರು ತಿಂಡಿಕೊಡಿಸು ಅಂದರು. "ಇದೇನೋ ನಿನ್ನ ಹಣೇಬರಹ ಬೀದಿ ನಾಯಿ ಸಹವಾಸ" ಅಂತ ಗೇಲಿ ಎಬ್ಬಿಸಿದರು. ಕೀಲೆಣ್ಣೆ ರಸ್ತೇಲಿ ಹೋದರೆ ಮಾನ ಉಳಿಯೋಲ್ಲಾ ಅಂತ ಗಲ್ಲಿಗೆ ನುಗ್ಗಿದೆ.

ರಾಮರಾಮಾ! ಒಂದೇ ಎರಡೇ ಮೂರೇ? ಹತ್ತಾರು ಬೀದಿ ನಾಯಿಗಳು ಮುನಿದೆದ್ದುವು. ಕೆಲವು ಕಜ್ಜಿ ನಾಯಿಗಳು ಯಥಾ ಸ್ಥಾನದಿಂದಲೇ ಟೈಗರಿನ ಆಗಮನದ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸಿದುವು. ಕೆಲವು ನಾಯಿಗಳು

ಗೆಳೆತನದ ತುತ್ತೂರಿಯನ್ನು ಭೋಂಕರಿಸಿದುವು. ಕೆಲವು ಗಂಡು ನಾಯಿಗಳು ಕೋರೆಯನ್ನು ತೋರುತ್ತಾ ಗುರುಗುಟ್ಟಿದುವು. ಒಂದೆರಡು ಧೈರ್ಯವಾಗಿ ಟೈಗರಿನ ಹತ್ತಿರ ಓಡಿಬಂದು, ನಿಂತು ಕೋಪವನ್ನು ಕಾರಿದುವು. ಕೆಲವು ಸಾಕು ನಾಯಿಗಳು ಬಂಧನವನ್ನು ಬಿಡಿಸಿಕೊಂಡು ಬಂದು ಟೈಗರನ್ನು ತಿಂದುಹಾಕ ಬೇಕೆಂದು ಹಂಬಲಿಸುತ್ತಾ ಬೊಗಳಿದುವು. ಅವುಗಳ ಬಾಯಿ ಮುಚ್ಚಿಸಲೂ ಮನೆಯವರೂ ಜೊತೆಗೆ ಬೊಗಳಿದರು. ಕೆಲವು ಪೋಲಿ ಹುಡುಗರು, ನಾಯಿ ನನ್ನದೆಂದು ಅರಿಯದೆ ಕಲ್ಲುಗಳನ್ನು ಬೀರಿದರು. ಕೈಲಿದ್ದ ವಾಕಿಂಗ್ ಸ್ಟಿಕ್‌ನಿಂದ ಅವುಗಳನ್ನು ಓಡಿಸಲು ನಾನೂ ಪ್ರಯತ್ನಿಸಿದೆ; ರೇಗಿದೆ; "ಉಫ್" ಅಂದೆ. ಎಲ್ಲೆಲ್ಲೂ ನಾಯಿಗಳ ಕೂಗೇ! ನಾನು ಅಸಹಾಯಶೂರನಾದೆ! ನಾರಾಯಣಾ ಎನ್ನುತ್ತ ಇನ್ನೊಂದು ಗಲ್ಲಿಗೆ ನುಗ್ಗಿದೆ. ಹತ್ತೆಂಟು ನಾಯಿಗಳು! ಹೆಣ್ಣು, ಗಂಡು, ಜಾತಿ, ಕಂತ್ರಿ ಅಬ್ಬಬ್ಬಾ ಒಮ್ಮೆಲೇ ಚಿಮ್ಮಿದುವು. ನನ್ನ ಸುತ್ತಾ ಹಾರಾಡಿದುವು. ನನ್ನ ಪಂಚೆಯನ್ನು ಕಿತ್ತು ಹರಿದುವು. ರುಮಾಲು ಮಣ್ಣು ಪಾಲಾಯಿತು. ವಾಕಿಂಗ್ ಸ್ಟಿಕ್ ಕೆಳಗೆ ಬಿತ್ತು. ತಲೆ ತಿರುಗಿತು; ಧೊಪ್ಪನೆ ಕೆಳಗೆ ಬಿದ್ದೆ !!

ಈಗ ಒಂದು ತಿಂಗಳಾಯಿತು; ಬೆಂಗಳೂರಿಗೆ ಟ್ರಾನ್ಸ್‌ಫರ್ ಮಾಡಿಸಿಕೊಂಡು. ಇನ್ನೂ ಆಗಾಗ ತಲೆ ತಿರುಗುತ್ತಾ ಇದೆ. ನಾಯಿಗಳನ್ನು ಕಂಡರೆ ಮೂರ್ಛೆ ಹೋಗ್ತೀನೆ!

—ಎಂ. ವಿ. ನಾ.

---

# ಕೆಂಪು ವಸ್ತ್ರ

---

- ೧ -

ಶ್ರೀಮಾನ್...............ರವರಿಗೆ ಶ್ಯಾನುಭೋಗ ನರಸಿಂಹಯ್ಯನು ಮಾಡುವ ವಿಜ್ಞಾಪನೆಗಳು.........

ಸ್ವಾಮಿ, ನಮ್ಮೂರು ಮಿಡ್ಲ್ ಸ್ಕೂಲಿನಲ್ಲಿ ಕಳೆದ ಹತ್ತು ವರ್ಷಗಳಿಂದಲೂ ಹೆಡ್ಮಾಸ್ಟರಾಗಿದ್ದು ಈಗ ಪ್ರಜಾಸೇವೆಯ ದೃಷ್ಟಿಯಿಂದ ಪರಸ್ಥಳಕ್ಕೆ ವರ್ಗವಾಗಿ ಹೋಗುವ ಶ್ರೀಮಾನ್ ಬೆತ್ತಯ್ಯನವರನ್ನು ಬೀಳ್ಕೊಡಲು ಒಂದು ಮಹಾ ಸಭೆಯನ್ನು ಏರ್ಪಡಿಸಬೇಕೆಂದೂ ತತ್ಸಭೆಯಲ್ಲಿ ಡಿಟೋ ರವರಿಗೆ ನಮ್ಮೂರಿನ ನೆನಪಿಗಾಗಿ ಒಂದು ಕೆಂಪು ವಸ್ತ್ರವನ್ನು ಹೊದಿಸಬೇಕೆಂದೂ ಹಲವರು ಹಿರಿಯರಿಗೆ ಪ್ರೇರಣೆಯಾಗಿರುವುದರಿಂದ ತಾವು ಈ ಸತ್ಕಾರ್ಯದಲ್ಲಿ ಸಹಕರಿಸಿ ಹಣ ಸಹಾಯ ಮಾಡಿ ಸದರೀ ವಸ್ತ್ರವನ್ನು ಕೊಳ್ಳಲು ಬೇಕಾದ ಮೊಬಲಗನ್ನು ಒದಗಿಸುವಿರೆಂದು ಭಾವಿಸುತ್ತೇನೆ........

ಇತಿ ತಮ್ಮ ವಿಧೇಯ,

ನರಸಿಂಹಯ್ಯ.

[ ಇದೇ ಕಾಗದವನ್ನು ಇನ್ನೂ ಹಲವರಿಗೆ ಕಳುಹಿಸಿದ್ದೇನೆ, ಕ್ಷಮಿಸಬೇಕು. ]

- ೨ -

ಶ್ರೀಮಾನ್ ನರಸಿಂಹಯ್ಯನವರಿಗೆ—

ಸ್ವಾಮಿ! ಬೆತ್ತಯ್ಯನವರಿಗೆ ವರ್ಗವೆಂಬ ವಾರ್ತೆಯನ್ನು ಕೇಳಿ ನಮ್ಮ ಮನೆ ಹೈಕಳಿಗೆ ತುಂಬಾ ಆನಂದವಾಗಿದೆಯಾದರೂ ನನಗೆ ಕೊಂಚ ಆಶ್ಚರ್ಯವುಂಟಾಗಿದೆ. ಅವರಿಗೆ ಕೊಡಬೇಕೆಂದು ನೀವು ನಿರ್ಧರಿಸಿರುವ ಕೆಂಪು ವಸ್ತ್ರವನ್ನು ದಯವಿಟ್ಟು ನಮ್ಮ ಅಂಗಡಿಯಲ್ಲೇ ಕೊಂಡುಕೊಳ್ಳಿ. ನಮ್ಮದು ಧರ್ಮೋದ್ಧಾರ ಸಂಘದ ಅಂಗಡಿ. ಬೆಲೆ ಖರಾರು; ಬಣ್ಣ ಗ್ಯಾರಂಟಿ. ಉಪಯೋಗಿಸುತ್ತಾ ಉಪಯೋಗಿಸುತ್ತಾ ಹೊಸ ಹೊಸ ಕೆಂಪುಗಳು ಕಾಣಿಸುತ್ತವೆ.

ಇತಿ,

ಗುರುಬಸವಯ್ಯ

ಕೆಂಪು ವಸ್ತ್ರ ಹಾಲ್............

- ೩ -

ಶ್ರೀಮಾನ್ ನರಸಿಂಹಯ್ಯನಿಗೆ—

ನಿಮ್ಮ ಕಾಗದದಲ್ಲಿ ಹೇಳಿರುವ ಹಲವರು ಹಿರಿಯರು ಯಾರು? ನನ್ನ ತಿಳಿವಳಿಕೆಗೆ ಬಾರದೆ ಅವರು ಎಲ್ಲಿ ಸೇರಿದರು? ಯಾವಾಗ! ಯಾರು ಅವರನ್ನು ಪ್ರೇರೇ

ಪಿಸಿವರು ? ಬಹುಶಃ ಬೆತ್ತಯ್ಯನೇ ಇರಬೇಕು. ಮೇಸ್ಟರುಗಳನ್ನ ನಾವು ನಂಬುವ ಹಾಗೆಯೇ ಇಲ್ಲ. ನನಗೊಬ್ಬರು ಮೇಷ್ಟರಿದ್ದರು. ಅವರು ನನಗೆ ಪಾಸಾಗುತ್ತದೆ ಅಂತ ಹೇಳಿದ್ದರು. ಕೊನೆಗೆ ನನಗಾದದ್ದು ಫೆಯಿಲು. ಸತ್ಕಾರದ ವಿಚಾರದಲ್ಲಿ ತನಗೆ ಕೆಂಪು ವಸ್ತ್ರ ಬೇಕೆಂದು ಸಲಹೆ ಕೊಟ್ಟು ಪಿತೂರಿ ನಡೆಸಿರುವ ಮೇಸ್ಟರ ವಿಷಯವನ್ನು ಮುಂದಿನ ವರ್ಧಂತಿಯಲ್ಲಿ ನಾನು ದಿವಾನರನ್ನೇ ರೂಬು ರೂಬು ಪ್ರಶ್ನಿಸುತ್ತೇನೆ.

ಇತಿ, ಈ ವಿಷಯದಲ್ಲಿ ನಿಮ್ಮವರಲ್ಲದ,

ಹುಚ್ಚು ವೀರೇಗೌಡರು,

ಶ್ರೀಮಾನ್ ಆರ್. ಎ. ಮೆಂಬರು.

– ೪ –

ಶ್ರೀಮಾನ್ ನರಸಿಂಹಯ್ಯನವರಿಗೆ—

ಬರಬರುತ್ತಾ ಕುದುರೇನೂ ಒಂದೇ ಕತ್ತೇನೂ ಒಂದೇ ಅಂತ ಆಗಿಬಿಟ್ಟಿದೆ. ಬೆತ್ತಯ್ಯನವರಿಗೆ ಇಂತಹ ಮರ್ಯಾದೆಯನ್ನು ಮಾಡಲೇಕೂಡದು ಎಂಬುದು ನನ್ನ ಅಭಿಪ್ರಾಯ. ಅವರು ಬರೀ ಪಕ್ಷಪಾತಿ. ಎದುರಂಗಡಿ ಶೆಟ್ಟರನ್ನು ಕಂಡರೆ ಅಡ್ಡ ಬೀಳುತ್ತಾರೆ, ನನ್ನನ್ನ ಕಂಡರೆ ಅಲಕ್ಷ್ಯಮಾಡುತ್ತಾರೆ. ಮೊನ್ನೆ ಶೆಟ್ಟರ ಮಗನನ್ನ ಎಲ್ಲರಿಗಿಂತ ಎತ್ತರವಾಗಿ ಬೆಂಚಿನ ಮೇಲೆ ನಿಲ್ಲಿಸಿದ್ದರಂತೆ. ನನ್ನ ಮಗನೇನು ನಿಲ್ಲುವುದಿಲ್ಲ ಅಂದನೇ? ಅವನಿಗೂ ಆ ಗೌರವ ಕೊಡಬಾರದಾಗಿತ್ತೆ? ಅಲ್ಲದೆ, ಹೋದ ತಿಂಗಳು ಒಂದು ದಿನ ಎದುರಂಗಡಿ ಶೆಟ್ಟರ ಮಗನನ್ನ "ಲಂಡನ್ ಎಲ್ಲಿದೆ?" ಅಂತ ಕೇಳಿ, ನನ್ನ ಮಗನನ್ನ "ಜೋಗದ ಜಲಪಾತ ಎಲ್ಲಿದೆ?" ಅಂದರಂತೆ. ಲಂಡನ್ ಎಲ್ಲಿ ಅಂತ ನನ್ನ ಮಗನನ್ನ ಕೇಳಬಾರದಾಗಿತ್ತೆ? ನನ್ನ ಮಗನ ಹಣೇ ಬರಹ ಕೇವಲ ಜಲಪಾತವೇನು? ಇಂತಹ ಪಕ್ಷಪಾತಿಗೆ ವರ್ಗವೇ ತಕ್ಕ ಶಿಕ್ಷೆ. ಕೆಂಪು ವಸ್ತ್ರ ಅನವಶ್ಯಕ. ಮಹಾಸಭೆ ಮಹಾಪರಾಧ.

ಇತಿ,

ಚಿಲ್ಲರೆ ಅಂಗಡಿ ಪುಟ್ಟಶಾಮಯ್ಯ.

– ೫ –

ಶ್ರೀ ನರಸಿಂಹಯ್ಯನಿಗೆ—

ಸ್ವಾಮಿ! ಬೆತ್ತಯ್ಯನವರು ಬಹುಶಃ ಜಾತಿಯಲ್ಲಿ.......ರು ಅಂತ ಕಾಣುತ್ತೆ. ಹಾಗಾಗಿದ್ದರೆ, ಈ ಸಮಾರಂಭಕ್ಕೆ ಸಹಾಯ ಮಾಡಲು ನನ್ನಿಂದ ಸಾಧ್ಯವಿಲ್ಲ. ಅದು ನನ್ನ ಮನಸ್ಸಾಕ್ಷಿಗೆ ತೀರ ವಿರೋಧ; ನಾನು ಕಲಿತ ವಿದ್ಯೆಗೆ ವ್ಯತಿರಿಕ್ತ.

ಇತಿ,

ಅಣ್ಣಯ್ಯ.

ಶ್ರೀ ನರಸಿಂಹಯ್ಯನವರಿಗೆ—

ನಿಮ್ಮ ಕಾಗದದಂತೆ ಈ ಊರಿನಲ್ಲಿ ನಾವು ಮೇಷ್ಟರುಗಳಿಗೂ, ಗೀಷ್ಟರುಗಳಿಗೂ ಸಭೆ ಕೂಡಿಸಿ ವಸ್ತ್ರ ಹೊದಿಸುವುದಕ್ಕೆ ಪ್ರಾರಂಭಿಸಿದರೆ, ಕೊನೆಯೆಲ್ಲಿ? ಮೊದಲೆಲ್ಲಿ? ಅಮಲ್ದಾರರು ನಮ್ಮನ್ನ ಸುಮ್ಮನೆ ಬಿಟ್ಟಾರೆಯೇ? ಷೇಕ್‌ದಾರರೋ, ಕಾನ್ಸ್ಟೇಬಲ್ಲೋ ಆದರೆ, ಅದೊಂದು ತರಹ ಮಾಡಬೇಕಾದದ್ದು. ಆದರೆ ಮೇಷ್ಟರಿಗೆ ಮರ್ಯಾದೆ ಮಾಡದೆ ಇದ್ದರೆ ಆಗುವ ಅನಾಹುತವೇನು?

ಇತಿ,

ಪಟೇಲ್ ಪೀಕಲಪ್ಪ.

—ನಾ. ಕ.

---

# ರಸವಿದ್ಯೆ

## ನವಾರಸಗಳು

ಶೃಂಗಾರ—ತನ್ನಲ್ಲಿ ಚೆಲುವಿಲ್ಲವಾದರೂ ತನ್ನರಸನ್ನೆಯಲ್ಲಿ ಚೆಲುವನ್ನು ಬಯಸುವವನ ಮನೋವಿಕಾರಗಳು.

ಹಾಸ್ಯ—ತನ್ನ ಮಂಕು ತನಗೇ ತಿಳಿಯದ ಪಾಂಡಿತ್ಯ.

ವೀರ—ಹಗೆಯು ಎದುರಿಗಿಲ್ಲದಾಗ ಬರುವ ಆವೇಶ.

ಕರುಣ—ತನಗೆ ಬರಬೇಕೆಂದಿದ್ದ ಸೋತ್ರಿಯ ಪ್ರಥಮ ಬಹುಮಾನ ಇನ್ನೊಬ್ಬನಿಗೆ ಸಂದಾಗ ಬರುವ ಭಾವನೆ.

ಭಯಾನಕ—ಗವಯಿಗಳೂ, ಭಾಗವತರೂ ಆಲಾಪನೆಗೆ ಬಾಯಿ ತೆರೆವಾಗ.

ಬೀಭತ್ಸ—ತನ್ನ ಸಿಯನ ಮೀಸೆಯ ಬುಡದಲ್ಲಿ ಬಿಳಿಗೂದಲು ಕಾಣಿಸಿದಾಗ.

ರೌದ್ರ—ವಾದದಲ್ಲಿ ಎದುರಾಳಿಯ ಪ್ರಶ್ನೆಗೆ ಸಮಂಜಸ ಉತ್ತರ ಕೊಡಲು ಬಾರದಾಗ.

ಶಾಂತ—ತನ್ನ ಅಪರಾಧ ಬಯಲಾದಾಗ.

—ಕಾರಂತ.

---

# ನಾನೂ ಕತೆಗಾರ

(ಕಲ್ಪನೆಯ ಗಾಳಿಗೋಪುರ)

ನನ್ನ ತಲೆ ತಿರುಗಿಹೋಗಿತ್ತು. ಕತೆ ಓದಿ ಓದಿ, ಕೇಳಿ ಕೇಳಿ, ಅದರಲ್ಲೂ ನೂರರಲ್ಲಿ ತೊಂಬತ್ತು ಪಾಲು ನನ್ನ ಕೆಳೆಯರು ಕತೆಗಾರರೇ. ಕೇಳಬೇಕೆ? ದಿನವೂ ಹೊಸ ಹೊಸ ಕತೆಗಳ ಕಡಿದಾಟ, ಹೊಡೆದಾಟವೇ!? 'ನನ್ನ ಕತೆ ಕೇಳು ಹೇಗಿದೆ?' ಎಂದು ಎಲ್ಲರೂ ಓದಿ ತೋರಿಸುವರೇ! ಮೇಲೆ ಚಿಕ್ಕದೊಂದು ಬೇಸರ ಬೀಸಿ ಕೆರಳಿಸುವ ಭಾಷಣ. 'ಕತೆ ಬರೆಯೋದು ಅಂದ್ರೆ 'ಸಾಮಾನ್ಯ ಅಲ್ಲ. ಭಾಷೆ ಬೆಡಗಿನದಾಗಿ, ಶೈಲಿ ಸರಳವಾಗಿ ಹೊಳೆ ಹರಿದಂತೆ ಹರಿಯಬೇಕು. ಪಾತ್ರ ಪೋಷಣೆ ಹೀಗಿರಬೇಕು, ಹಾಗಿರಬೇಕು. ಅದೂ ಒಂದು ಕಲೆ ಸಿಕ್ಕವರಿಗೆ ಸಾಧ್ಯ ವಿಲ್ಲ. ಇಲ್ಲೀ ನೋಡು! ನಿನಗೆ ಕಲೆ ಬರೆಯಲು ಬರುತ್ತದೆಯೇ? ಈಗಾಗಲೇ ನಾನೂ ಒಬ್ಬ ಕಳಿತ ಕತೆಗಾರನಾಗಿಬಿಟ್ಟಿದ್ದೇನೆ. ಆ ಪತ್ರಿಕೆ, ಈ ಪತ್ರಿಕೆ ಮೊದ ಲಾದವುಗಳಲ್ಲಿ ನನ್ನ ಹೆಸರು 'ಶ್ರೀಮಾನ್........ಅಂತ ಪ್ರಿಂಟಾಗಿ ಬಂದಿದೆ.' ಹೀಗೆನ್ನುವಾಗ ನನ್ನ ಬಾಯಲ್ಲೂ ನೀರೂರಿ, ನಾನೂ ಕತೆಗಾರನಾಗಬೇಕು. ನನ್ನ ಹೆಸರೂ 'ಶ್ರೀಮಾನ್'........ಅಂತ ಕತೆಯ ಮೇಲೆ ಪ್ರಿಂಟಾಗಿ ಬರುತ್ತಿ ಎಂಬ ಹಂಬಲದ ಹೂವು ಅರಳಿ ನಲಿಯುತ್ತಿತ್ತು. ನಲಿನಲಿದು ಇಂದು ತಲೆ ತಿರುಗಿಸಿಬಿಟ್ಟಿದೆ. ಹೇಗೂ! ಒಂದು ಕತೆ ಬರ್ದು ಏಳಲೇ ಬೇಕೆಂದು ನಿರ್ಧರಿಸಿದೆ.

ಕತೆ! ಕತೆಯೇನೋ ಬರೆಯಬಲ್ಲೆ! 'ಪ್ರಕಟನಾ ಅರ್ಹವಾದೀತೆ?' ಎಂಬ ಸಂಶಯ ಪ್ರಕಟವಾಗದೇನು! ಆಗುತ್ತದೆ. ನನ್ನ ಕೆಳೆಯರೆಲ್ಲ ಬರೆದ ಕತೆಗಳು ಪ್ರಕಟವಾಗುತ್ತವಲ್ಲ! ಅದರಲ್ಲೆಷ್ಟೋ ಉಪಯೋಗವಿಲ್ಲದವು ಮತ್ತೆ ಕೆಲವು ಕದ್ದು ಬರೆದವು! ಕೃತಿ ಚೌರ್ಯ!! ಸೋಜಿಗದ ಸಂಗತಿ! ಇದಕ್ಕೇನು ಕಾರಣವಿರ ಬೇಕು? ಬರೆಹಗಾರರಿಗಂತೂ 'ತಮ್ಮ ಹೆಸರು ಬರುತ್ತದೆ' ಅಂತ (ದುರ್+)........ ಆಶೆಯಿಂದ ಬರೆದರು. 'ಹೇಗೇ ಆಗಲಿ, ಪುಟ ತುಂಬಿತು ಸಾಕು' ಅಂತ. ಸಂಪಾ ದಕರು ಪ್ರಕಟಿಸುತ್ತಾರೇನು? ಹೌದು! ಹಾಗೇ ಕಾಣುತ್ತದೆ. ಅಂತೂ ಇಂತೂ! ಸಂಪಾದಕರಿಗೆ ಗತಿಯಿಲ್ಲ! ಬರಹಗಾರರಿಗೆ ಮತಿಯಿಲ್ಲ! ಹೊಸದಾಗಿ ಬರೆಯುವ ನನಗೆ 'ಪ್ರಕಟವಾದೀತೇ' ಎನ್ನುವ ಭೀತಿಯಿಲ್ಲ!

ಇಷ್ಟೆಲ್ಲ ಮನೋ ನಿಶ್ಚಯ ಮಾಡಿ ಕತೆ ಬರೆಯೋದಕ್ಕೆ ಎರಡು ಬಿಳಿ ಕಾಗದ ತುಂಡು 'ಕರೇ ಹಕ್ಕಿ' ಪೆನ್ನು ಹಿಡಿದು ವಿಚಾರ ಸಮುದ್ರದಲ್ಲಿ ಈಜ ತೊಡಗಿದೆ.

ಎಂತಹ ಕತೆ ಬರೆಯಬೇಕು! ಪ್ರೇಮ ಕತೆಯೇ?.........ಅದರಲ್ಲೇನು? ಯಾವಳಾದರೂ ಒಬ್ಬಳಿಗೆ, ಯಾವನನ್ನಾದರೂ ಬೆನ್ನು ಹತ್ತಿಸಿ, ಕತೆಗಾರ ಪುರೋ ಹಿತ ಪಾತ್ರ ವಹಿಸಿ, ಬ್ರಹ್ಮಗಂಟು ಬಿಗಿದು ಬಿಟ್ಟರೆ........! ಛೇ........ವಾಚಕರಿಗೆ 'ಇಂಪ್ರೇಶನ್' ಆಗಲಿಕ್ಕಿಲ್ಲ.

ಸಾಮಾಜಿಕ ಕತೆ ಬರೆದರೆ! ಹೋ!....ಹೋ!....ಬರೆಯಬಲ್ಲೆ. ಯಾವ ಳಾದರೂ ಓರ್ವ ಬಿಟ್ಟೀ ಹದಿನಾರು ವರ್ಷದ ತರುಣಿಯನ್ನು ಹಿಡಿದು, ಯಮ

ಲೋಕಕ್ಕೆ ಅಪ್ಲಿಕೇರ್ಶ ಮಾಡಿಕೊಂಡ ವಯೋವೃದ್ಧ ವರನಿಗೆ ಮದುವೆಮಾಡಿಸಿ ಅವಳನ್ನು ವಿಧವೆ ಮಾಡಿ, ಕೆರೆಯಲ್ಲೋ ಭಾವಿಯಲ್ಲೋ ನೂಕಿಬಿಟ್ಟು, ಸಮಾಜಕ್ಕೆ ಸಿಕ್ಕಾಪಟ್ಟೆ ಬೈದುಬಿಟ್ಟರೆ........! ಈ ವಿಚಾರ ತೀರಾಹಳೇದು ಸ್ವಾರಸ್ಯವಿಲ್ಲ.

ಹಾ! ಪತ್ತೇದಾರಿ ಕತೆ ಬರೆಯಬೇಕು. ನನಗೆ ಬರೆಯಲು ಬಂದೀತೆ? ಅಹಹ! ಬಾರದೇನು? 'ಮಧ್ಯರಾತ್ರಿ. ಕಣ್ಣು ಕೂರಿಟ್ಟರೂ ಕಾಣಿಸದಂತಹ ಗಾಢಾಂಧಕಾರ, ಹೂ ಬಳ್ಳಿಯ ಕಾಡಿನ ಬೀದಿಯೊಂದು. ನಿರ್ಜನ ಪ್ರದೇಶ. ಇಂತಹ ಸಮಯದಲ್ಲಿ, ದೂರ ಗಿಡದ ಗುಂಪಿನಲ್ಲಿ ಯಾರೋ! ನಾಲ್ವರು ಪಿಸುಗುಟ್ಟುತ್ತಿರುವರು. (ತೂಕಡಿಕೆಯಲ್ಲಿದ್ದ ವಾಚಕರಿಗೆ—) ವಾಚಕ ಮಹಾಶಯರೇ! ಬನ್ನಿರಿ ನಾವು ಅಲ್ಲಿಗೆ ಹೋಗಿ ಅವರೇನು ಮಾತಾಡುತ್ತಾರೆ ಅಂತ ಕೇಳೋಣ' ಎಂದು ಮೊದಲು ಮಾಡಬೇಕು........

ಬೇಡ! ಬೇಡ! ಇವು ಯಾವೂ ಬೇಡ! ಐತಿಹಾಸಿಕ. ಬರೆದರೆ........? ಛೀ...... ಛೀ ಅದೂ ಬೇಡ. ಹೊಸ ನಮೂನೆ........ತೀರಾ ಹೊಸ ನಮೂನೆ ........ತೀರಾ ಹೊಸ ನಮೂನೆಯ ಕತೆ ಬರೆಯಬೇಕು. ಓದಿದರೆ........! ಓದುಗರಿಗೆ ಮೈ ಜುಮ್ಮೆಂದು, ನವಿರೇಳಬೇಕು. ತಕ್ಷಣ! ಭಾವನಾಂಗಿ ಅವರನ್ನು ಅಪ್ಪಿಬಿಡಬೇಕು! ಸವತಿಯನ್ನು ಕಂಡು ಅವರ ಹೆಂಡಂದಿರು 'ಹಿಟ್ಲರ್' ಆದಾಗಲೇ ಪ್ರಜ್ಞೆ ತಿಳಿದಿರಬೇಕು! ಅಂತಹ ಕತೆ ಬರೆಯಬೇಕು!........ಅಂದರೆ ಎಂಥದಿರಬೇಕು........?

ಹಾ! ಹೊಳೆಯಿತು!! ಒಂದೇ ಕತೆಯಲ್ಲಿ........ಈಗ ನಾನು ಬರೆಯಲಿರುವ ಈ ಒಂದೇ ಕತೆಯಲ್ಲಿ........ರೋಮಾನ್ಸದ ರಸವೂ ಇಳಿದಿರಬೇಕು! ಪತ್ತೇದಾರಿ ಪಾಕವೂ ಹರಿಯಬೇಕು!........ಐತಿಹಾಸಿಕ ರುಚಿಯೂ ಅಳವಡಿಸಿರಬೇಕು! ಈ ಹೊಸ ನಮೂನೆಯ ಕತೆಗೆ........"ಪತ್ತೇದಾರೈತಿಹಾಸಿಕ ಸಮಾಜಿಕ ಕತೆ" ಎಂದು ನಾಮಕರಣ ಮಾಡಿ 'ನಾವೆಲ್ಲರೂ ಕತೆಗಾರರು' ಎಂದು ಜಂಬ ಕೊಚ್ಚಿಕೊಳ್ಳುವ ಕೆಳೆಯರಿಗೆ ಓದಿ ತೋರಿಸುತ್ತೇನೆ. ಆಗ ನೋಡಿ ಅದರ ಮಜಾ! ಸರಿ 'ಸರಸ್ವತಿ ಪ್ರಸನ್ನ' ಅಂತ ಬರೆದು ದೇವಿಯನ್ನು ಪ್ರತ್ಯಕ್ಷ ಮಾಡಿಕೊಂಡೆ. ಇನ್ನು ಬರೆಯುತ್ತೇನೆ. ಹಾ! ಇದೇನು!! ಹೇಗೆ ಸುರುವು ಮಾಡುವುದು......? ತಲೆ ಕಡಿತ......

"ಏನ್ರಿ ರೇಶನ್ ಶಾಪಿಗೆ ಹೋಗೋದಿಲ್ಲವೆ? ಇಂದೇ ಕಡೆಯ ದಿನ. ಕಾಳು ತರದಿದ್ದರೆ ನಾಳೆ ಹೊಟ್ಟೆಗೆ ಹುಣ್ಣು" ಎಂದು ನನ್ನವಳ ಚೀರಾಟ. ಅಡಿಗೆಯ ಮನೆಯಿಂದ.

ವಾಚನಾಭಿರುಚಿಗಳೇ! ತಮ್ಮ ಕುತೂಹಲವೂ ಕೆರಳಿರಬಹುದು, ಈ ಹೊಸ ಕತೆ ಓದಲು. ಕ್ಷಮಿಸಿ! ಮುಂದಿನ ಸಾರೆ ನಿಜಕ್ಕೂ ಬರೆಯುತ್ತೇನೆ.

ನೋಡಿ! ನಾವೆಲ್ಲ ಸಂಸಾರಿಕರು! ಇವೆಲ್ಲ ತಾಪತ್ರಯ! ಅದರಲ್ಲೂ ನಾನು ಹೊಸದಾಗಿ ಬರೆಯುವವ!

—ರಾ. ಶಾ. ಶಿರೋಳ.

# ಮುಂದೇನು ದಾರಿ ?

ನಮ್ಮೂರು ತೀರಾ ಹಳ್ಳಿ. ಆದರೆ ಮಧ್ಯದಲ್ಲೊಂದು ಮಾರ್ಗ ಹಾದು ಹೋಗಿದೆ. ಮಾರ್ಗದಲ್ಲಿ ಮೋಟಾರ್, ಬೈಸ್‌ಕಲ್ಲು, ಗಾಡಿ ಸಂಚಾರದ ಮಾತಿರಲಿ. ಜಾನುವಾರಿನ ಸರ್ಕೀಟಿಗೂ ತೀರಾ ಕಷ್ಟ. ಮಾರ್ಗವಾಗಿ ಹತ್ತು ಹದಿನೈದು ವರ್ಷವಾಯಿತು. ಅಂದಿಗೂ ಇಂದಿಗೂ ವ್ಯತಾಸವಿಷ್ಟೆ. ಈಗ ಮಾರ್ಗದ ಮಧ್ಯದಲ್ಲಿ ಗಿಡ ಮರಗಳು ಬೆಳೆದಿವೆ. ಅಂದು ಇರಲಿಲ್ಲ. ಮಾರ್ಗದ ಬದಿಯಲ್ಲಿ ಫರ್ಲಾಂಗು, ಮೈಲು ಕಲ್ಲುಗಳ ಬದಲಿಗೆ ಅದರ ಸ್ಥಾನದಲ್ಲಿ ಚಹ ಹೋಟ್ಲುಗಳನ್ನು ಕಾಣಬಹುದು. ಅಂತೂ ಉಪಯೋಗವಿಲ್ಲದಿದ್ದರೂ ಗ್ರಾಮ ಮಧ್ಯದಲ್ಲೊಂದು ಮಾರ್ಗವಿದೆ. ಬ್ರಾಹ್ಮಣರ ಎದೆ ಮೇಲೆ ಜನಿವಾರವಿದ್ದಂತೆ. ಸುಧಾರಣಾಯುಗದಲ್ಲಿ ನಮ್ಮೂರಿಗಾದ ಸುಧಾರಣೆ ಇಷ್ಟೆ. ನಮ್ಮೂರ ಚಹ ಹೋಟ್ಲುಗಳೆಂದರೆ ಜುಗಾರಿ ಕೇಂದ್ರ ಆಫೀಸು ಮತ್ತು ನಾನಾ ರೀತಿಯ ವರ್ತಮಾನ ಅಲ್ಲಿ ಸಿಗುತ್ತೆ. ಊರ ಬಹುಮಂದಿ ದಿವ್ಸಕ್ಕೊಮ್ಮೆ ಹಾಜರಾಗುವವರೇ ! ಈಗ ಹೆಚ್ಚಿನ ವರ್ತಮಾನವೆಲ್ಲಾ "ಬಿಡ್ಡ್" ಇಲಾಖೆಗೆ ಸಂಬಂಧಪಟ್ಟದ್ದು. ಪುತ್ತೂರು ಕಾಫಿ ಹೋಟ್ಲು ರಾಮಯ್ಯನಿಗೆ ರೂ. 400 ಸಿಕ್ಕಿತು. ಟೈಲರ್ ಭಾಸ್ಕರನಿಗೆ ರೂ. 150. ಕ್ಷೌರಿಕ ದೂಮನಿಗೆ 80 ರೂ. ಕ್ಲಾರ್ಕ್ ಪಿ. ಜಿ. ಎನ್. ರಾಯರಿಗೆ 800 ರೂ. ಹೀಗೆಲ್ಲಾ ದೈನಂದಿನ ಪ್ರಕಟಣೆ. "ಹಣ ಕಂಡರೆ ಹೆಣ ಬಾಯಿಬಿಡುತ್ತದಂತೆ ಮತ್ತೆ ಜಿನ ಬಾಕಿ ಮಾಡೀತೇ ?'' ಈ ರೂಪಾಯಿ ಸಂಖ್ಯೆಗಳೆಲ್ಲಾ ಬಡವನಾದ ನನ್ನ ಮನಸ್ಸನ್ನು ಆಕಡೆಗೆಳೆಯಿತು. ನಾನು ಪೇಟೆಗೆ ಆಗಿಂದಾಗ್ಯೆ ಹೋಗಿ ಬಿಡ್ಡ್ ಡಿಪಾರ್ಟ್‌ಮೆಂಟಗೆ ಸೇರಲು ಪ್ರಾರಂಭಿಸಿದೆ. ಕಡೆಗೆ ಹಳ್ಳಿಯಿಂದ ಹೋಗಿ ನನ್ನ ಈ ಕಾರ್ಯಕ್ರಮ ನಡೆಸುವುದು ಕಷ್ಟವಾಯ್ತು. ಅದಕ್ಕಾಗಿ ಪೇಟೆಯಲ್ಲಿ ಹೋಗಿ ನಿಂತೆ.

ನಾನು ಕೊಂಚ ಹಣ ಕಳಕೊಂಡೆ. ಅಲ್ಲದೆ ಕಾಫಿ ಊಟ ಇದಕ್ಕೂ ಕೂಡ ಇದ್ದ ಅಲ್ಪ ಸ್ವಲ್ಪ ಹಣ ಮುಗಿಯುತ್ತಾ ಬಂತು. ಅಲ್ಲಿ ಇಲ್ಲಿ ಸಾಲ ಮಾಡಬೇಕಾಯಿತು. "Try Try Try again Try until you Succeed." ಎಂಬ ಇಂಗ್ಲೀಷ್ ಭಾಷೆಯ ಒಂದು ಮಾತನ್ನು ನೆನಪಿಗೆ ತಂದುಕೊಂಡೆ. ಆದರೆ, ಸಫಲವಾಗಲಿಲ್ಲ.

ಇತ್ತ ಊಟದ ಹೋಟ್ಲು ಮೇನೇಜರನು ನಾಲ್ಕು ಜನರ ಮುಂದೆ ನನ್ನ ಬಾಕಿ ಹಣ ಕೇಳಿದ. ಮನಸ್ಸಿನಲ್ಲಿ ಸಿಟ್ಟುಬಂತು. ಲೆಕ್ಕದಲ್ಲಿ ವ್ಯತ್ಯಾಸಬಂತು. ಕಡೆಗ ನನ್ನ ಲೆಕ್ಕಕ್ಕೆ ಒಪ್ಪಿದ. ಈಗಲೇ ತೀರಿಸಬೇಕೆಂದು ಗರ್ಜಿಸಿದ. ಒಂದು ಗಂಟೆ ಪುರುಸತ್ತು ಕೇಳಿ ಅಲ್ಲಿಂದ ಹೊರಟೆ. ನನ್ನ ಕಿವಿಯಲ್ಲಿ ಹಿರಿಯರು ಮಾಡಿಸಿ ಹಾಕಿದ ಭಂಗಾರದ ಒಂಟಿಯಿತ್ತು. ಅದನ್ನೇ ಮಾರಿ ಸಾಲ ತೀರಿಸಿದೆ. ಬೇಸರ ಬಂದು ಮನೆಗೆ ಹೊರಟುಹೋದೆ. ಮನೆಯಲ್ಲಿ ನನ್ನ ಒಂಟಿಯ ಪ್ರಶ್ನೆ ಬಂತು. ನಾನು "ಈಗ ಬಹುಮಂದಿ ಧರಿಸೋದಿಲ್ಲ. ಅದಕ್ಕಾಗಿ ತೆಗೆದೆ'' ಎಂದೆ. "ಸಣ್ಣ ಮಗುವಿಗೆ ಮೂಗು ಚುಚ್ಚಬೇಕು. ಭಂಗಾರ ಬೇಕು. ಈಗ ಚಿನ್ನಕ್ಕೂ ಬಹಳ

ಬೆಲೆ ಇದೆ. ಅದನ್ನು ಕೂಡ್ಲೇ ಕೊಡಬೇಕು" ಮರುತ್ತರ ಬಂತು. ಎಂಟು ದಿವಸದ ವಾಯಿದೆ ಕೇಳಿ ಮನೆ ಬಿಟ್ಟು ಹೊರಟೆ. ಅಲ್ಲಿ ಇಲ್ಲಿ ಅಲೆದೆ. ಅಲ್ಲಿ ಇಲ್ಲಿ ಉಂಡೆ.

ಒಂದು ದಿನ ಏನೇನೋ ಗೊಣಗುಟ್ಟುತ್ತಾ, ದೈವವನ್ನು ಹಳಿಯುತ್ತಾ ಹೋಗುತ್ತಿದ್ದೆ. ತಿರುಗಿ ನೋಡಿದೆ. ಯಾರೋ ಒಬ್ಬ ಹಿಂದಿನಿಂದ ಬರುತ್ತಿದ್ದ. ನೋಡುವಾಗ ಹುಂಬನಂತೆ ಕಾಣುತ್ತಿದ್ದ. ಅಲ್ಲೇ ನಿಂತೆ. ಸಮೀಪಿಸಿದೊಡನೇ ಯೋಗಕ್ಷೇಮ ಮಾತಾಡುತ್ತಾ ಮುಂದುವರಿಯುತ್ತಿದ್ದೆವು. ಅವನ ಕಿವಿಯಲ್ಲಿ ಒಂಟೆಯಿತ್ತು. ಅದನ್ನು ನೋಡಿ ಒಂದು ಯೋಚನೆ ಬಗೆದೆ. ನೋಡಲಿಕ್ಕಾಗಿ ಅವನ ಕಿವಿಯಿಂದ ಒಂಟೆಗಳನ್ನು ತೆಗೆಯ ಹೇಳಿದೆ. ತೆಗೆದುಕೊಟ್ಟ. ತಿರುಗಿಸಿ ತಿರುಗಿಸಿ ನೋಡುತ್ತಾ ಮಾತಾಡುತ್ತಾ ಮುಂದುವರಿದೆವು. ದೂರದಲ್ಲಾರೋ ದೊಡ್ಡ ಮನುಷ್ಯರು ಬರುತ್ತಿದ್ದರು. ನಾನು "ಇದು ನನ್ನ ಒಂಟೆ'' ಎಂದೆ.

ಆತನು ಗಾಬರಿಯಿಂದ "ನಿನ್ನದು, ನನ್ನದಲ್ಲವೇ'' ಎಂದ. ನಮ್ಮೊಳಗೆ ಮಾತಿಗೆ ಮಾತು ಬೆಳೆದು ಜೋರಾಯಿತು. ಇಷ್ಟಾಗುವಾಗ ದೂರದಿಂದ ಬರುತ್ತಿದ್ದವರು ನಮ್ಮನ್ನು ಸಮೀಪಿಸಿದರು. ನಮ್ಮ ಗದ್ದಲವನ್ನು ಕೇಳಿ ''ಸಂಗತಿಯೇನೆಂದು'' ವಿಚಾರಿಸಿದರು. ''ಇವು ನನ್ನ ಒಂಟೆಗಳು ಅದನ್ನೇ ಈತ ಒಮ್ಮೆ ತೆಗೆದು ತೋರಿಸು ಎಂದ ಅದಕ್ಕಾಗಿ ತೆಗೆದೆನು. ಈಗ ನನ್ನದು ನನಗೆ ಕೊಡಬೇಕೆಂದು ಜೋರು ಮಾಡುತ್ತಾನೆ ಎಂದೆ. ಆತನು ಸದ್ರಿ ಪಿರ್ಯಾದೆಯನ್ನೇ ದಾಕ್ಲು ಮಾಡಿದ. ಆ ದೊಡ್ಡ ಮನುಷ್ಯ ಇಬ್ಬರ ಕಿವಿಗಳನ್ನೂ ನೋಡಿದರು. ಇಬ್ಬರ ಕಿವಿಯಲ್ಲಿಯೂ ಒಂಟೆಯಿಲ್ಲ. ವಿಚಾರಿಸಲೀಗ ನನ್ನ ಪಂಚಾತಿಕೆ ತೀರ್ಮಾನಕ್ಕೆ ಒಪ್ಪಿಕೊಳ್ಳಬೇಕು. ಪಕ್ಷಪಾತವಿಲ್ಲದೆ ಸತ್ಯ ನ್ಯಾಯ ಕಂಡಂತೆ ತೀರ್ಮಾನಿಸುತ್ತೇನೆ. ಇದು ರಾಜಿಯಿಂದ ತೀರದಿದ್ದರೆ ನೀವು ಹೊಡಕೊಳ್ಳಲೂಬಹುದು. ನನ್ನ ತೀರ್ಮಾನಕ್ಕೆ ತಪ್ಪಿದವರನ್ನೇ ಬಿಟ್ಟು ಒಪ್ಪಿದವರ ಪಕ್ಷದಿಂದ ನಾನು ಸಾಕ್ಷಿ ಹೇಳುತ್ತೇನೆ. ಹೀಗೆ ಇಬ್ಬರಿಗೂ ಸಮಾಧಾನವಷ್ಟೆ, ಎಂದರು. ನಾವಿಬ್ಬರೂ ಒಪ್ಪಿದೆವು.

ದೊಡ್ಡ ಮನುಷ್ಯ "ಇಬ್ಬರ ಕಿವಿಯಲ್ಲಿಯೂ ಒಂಟೆಯಿಲ್ಲ. ತೂತು ಇದೆ. ಸಾಕ್ಷಿಯೂ ಇಲ್ಲ. ಇಬ್ಬರ ಹೇಳಿಕೆಯೂ ಒಂದೆ. ಆದ್ದರಿಂದ ಒಂದು ಒಬ್ಬನಿಗೆ ಮತ್ತೊಬ್ಬನಿಗೆ ಮತ್ತೊಂದು '' ಎಂದು ತೀರ್ಮಾನಿಸಿದರು. ಒಂದಾದರೂ ಪುಕ್ಸಟ್ಟೆ ಸಿಕ್ಕಿತಲ್ಲ ಎಂದು ಮನದಲ್ಲೇ ಯೋಚಿಸಿ ನಾನು ಒಪ್ಪಿದೆ. ಅವನೂ ಒಪ್ಪಿದ. (ಎರಡರ ಪೈಕಿ ಒಂದಾದರೂ ಉಳಿಯಿತಲ್ಲ ಎಂದು ಅವನೂ ಯೋಚಿಸಿರಬೇಕು.) ನನ್ನ ಕೈಯಿಂದ ಒಂದು ಒಂಟೆ ತೆಗೆದು ಆತನಿಗೆ ಕೊಟ್ಟರು. ಒಂದು ನನಗುಳಿಯಿತು. ಮೂವರೂ ಅವರವರ ದಾರಿ ಹಿಡಿದೆವು. ಅದಿರಲಿ,

ಈಗ ಒಂದು ಸಂಪಾದಿಸಿದೆ. ಇನ್ನೊಂದು ಆಗಬೇಕಲ್ಲ! "ಮುಂದೇನು ದಾರಿ?''

—ಶು. ಪುರಂಧರ.

---



# ಕೇಸರಿ ಕುಟೀರಂ ಲಿ., ಮದರಾಸು

## ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

## ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇನ್‌ಫ್ಲೂಯೆಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

## ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ, : : : ಬೆಂಗಳೂರು ಸಿಟಿ.**

Printed by B. S. Iyengar, Bangalore City.
Publisher—B. N. Gupta, Editor—M. SHIVARAM.